# ಕೊಡಗು  ಸಂಗಾತಿ


ನವೆಂಬರ್ 1 ರಿಂದ 30, 2002 ಪಾಕ್ಷಿಕ ಪತ್ರಿಕೆ ( ಬೊಂತಲ್ 15-30 ಜಾರ್ಧೆ 1-14, )

1055c, ದೊಡ್ಡಣ್ಣ ಬಿಲ್ಡಿಂಗ್ಸ್, ಹುಣಸೂರು ರಸ್ತೆ, ಹಿನ್‌ಕಲ್ಲ್ ಅಂಚೆ, ಮೈಸೂರು - ೫೭೦ ೦೧೭

ಸಂಪಾದಕಿ : ಪಟ್ಟಡ ಶೀಲಾಮಣಿ Registered : 10-01-96 TCI Kar. 09592 ಕನ್ನಡ ಮತ್ತು ಅರೆಗನ್ನಡ ಭಾಷೆಲಿ ಪ್ರಕಟಿತ

Reg. No. KA/SK/MYS-88 ಸಂಪುಟ : 6 ಸಂಚಿಕೆ : 15-16 ಪುಟಗಳು : 24 ಬೆಲೆ ರೂ. : 12-00




ಕಾಶೀ ವಿಶ್ವೇಶ್ವರ ಸ್ವಾಮಿ ದೇವಸ್ಥಾನ ಮಹದೇವಪುರ



ಚಿತ್ರ : ಜಯಪ್ಪ, ಮಹದೇವಪುರ


ಲೇಖನ : ಒಳಪುಟದಲ್ಲಿ.


ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ಮಹದೇವಪುರ

ಗ್ರಾಮದಲ್ಲಿ ಕಾವೇರಿ ನದಿಗೆ ನೂತನವಾಗಿ ನಿರ್ಮಿಸಲಾಗಿರುವ ಸೇತುವೆ.





ದಿನಾಂಕ 14-10-2002 ರಂದು "ಮಡಿಕೇರಿ ದಸರಾ 2002" ರ ಜನೋತ್ಸವದಲ್ಲಿ
ಕೊಡಗು ಗೌಡ ಮಹಿಳಾ ಒಕ್ಕೂಟದ ನೂತನ್ ತಂಡದವರಿಂದ "ಸುಗ್ಗಿ ಸುವ್ವಾಲೆ ಕುಣಿತ"
ಕೋಲಾಟ ಮತ್ತು ಡಿನ್ನಾನೊ ಡಿನಾನೊ ನೃತ್ಯ ಪ್ರದರ್ಶನದ ದೃಶ್ಯ.

## ಮೈಸೂರಿನಲ್ಲಿ ಹುತ್ರಿ ಪ್ರಯುಕ್ತ ಕದಿರು ಮತ್ತು ನೆರೆ ವಿತರಣೆ

ಕೊಡಗಿನ ನಾಡ ಹಬ್ಬವಾದ ಹುತ್ತೇರಿ ಹಬ್ಬವನ್ನು ನವೆಂಬರ್ 21 ರ ರಾತ್ರಿ ನೆರೆ ಕಟ್ಟುವ ಮತ್ತು ಕದಿರು ತೆಗೆಯುವ ಕಾರ್ಯಕ್ರಮವನ್ನು ಮೈಸೂರಿನ ಗೌಡ ವಿದ್ಯಾರ್ಥಿ ನಿಲಯದಲ್ಲಿ ಹಮ್ಮಿಕೊಳ್ಳಲಾಗಿದೆ. ಆದ್ದರಿಂದ ಜನಾಂಗ ಬಾಂಧವರು ಹೆಚ್ಚಿನ ಸಂಖ್ಯೆಯಲ್ಲಿ ಸೇರಿ ಜಯಪ್ರದವಾಗಿ ನಡೆಯಿಸಿಕೊಡುವಂತೆ ಕೋರಲಾಗಿದೆ.

*ಅಧ್ಯಕ್ಷರು, ಮತ್ತು ಕಾರ್ಯಕಾರಿ ಮಂಡಳಿ, ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಮಹಿಳಾ ಒಕ್ಕೂಟ, ಮೈಸೂರು.*

## *ತಿದ್ದುಪಡಿ*

ಕೊಡಗು ಸಂಗಾತಿ ಸಂಪುಟ 6, ಸಂಚಿಕೆ 13-14ರಲ್ಲಿ (ಅಕ್ಟೋಬರ್ ಸಂಚಿಕೆ) ನನ್ನ ಮಾವ ದೇವಿಪ್ರಸಾದ್ ಲೇಖನವನ್ನು ಬರೆದವರು ಯಂ. ಬಿ. ಸದಾಶಿವರೆಂದು ಓದುಗರು ಓದಿಕೊಳ್ಳುವುದು. ಬಿಟ್ಟು ಪ್ರಮಾದಕ್ಕೆ ವಿಷಾದಿಸುತ್ತೇವೆ.

*- ಸಂಪಾದಕ.*

## ಸೇನೆಗೆ ಭರ್ತಿ ರ್‍ಯಾಲಿ

ಭಾರತೀಯ ವಾಯುಸೇನೆಯಲ್ಲಿನ ಟೆಕ್ನಿಕಲ್ ಮತ್ತು ನಾನ್‌ಟೆಕ್ನಿಕಲ್ ಹುದ್ದೆ ಭರ್ತಿಗಾಗಿ ನವಂಬರ್ 9 ಮತ್ತು 10 ರಂದು ಮಂಗಳೂರಿನ ಕದ್ರಿಯಲ್ಲಿರುವ ಕರ್ನಾಟಕ ಪಾಲಿಟೆಕ್ನಿಕ್ ಅವರಣದಲ್ಲಿ ಆಯ್ಕೆ ಪ್ರಕ್ರಿಯೆ ನಡೆಯಲಿದೆ.

## ಉಚಿತ ತರಭೇತಿಗೆ ಅರ್ಜಿ ಆಹ್ವಾನ

ನಗರದ ಹಿನಕಲ್ ರಸ್ತೆಯಲ್ಲಿರುವ ರುಡ್‌ಸೆಟ್ ಸಂಸ್ಥೆಯ ಆಶ್ರಯದಲ್ಲಿ ೧೩ ದಿನಗಳ ಸ್ಕ್ರೀನ್ ಪ್ರಿಂಟಿಂಗ್ ಮತ್ತು ಬುಕ್ ಬೈಂಡಿಂಗ್ ಉಚಿತ ತರಭೇತಿಯನ್ನು ಆಯೋಜಿಲಾಗಿದ್ದು, ಆಸಕ್ತ ಅಭ್ಯರ್ಥಿಗಳಿಂದ ಅರ್ಜಿ ಆಹ್ವಾನಿಸಲಾಗಿದೆ. ೧೮ರಿಂದ ೩೫ವರ್ಷ ವಯೋಮಿತಿಯ, ಮೈಸೂರು, ಮಂಡ್ಯ ಹಾಗೂ ಚಾಮರಾಜನಗರ ಜಿಲ್ಲೆಗಳ ಕನ್ನಡ ಓದಲು, ಬರೆಯಲು ಬರುವ ನಿರುದ್ಯೋಗಿ ಯುವಕ, ಯುವತಿಯರು ಅರ್ಜಿ ಸಲ್ಲಿಸಬಹುದು. ಅಭ್ಯರ್ಥಿಗಳು ಅರ್ಜಿಯನ್ನು ಬಿಳಿ ಕಾಗದದಲ್ಲಿ ತಮ್ಮ ಹೆಸರು, ವಿಳಾಸ, ವಿದ್ಯಾರ್ಹತೆ, ವಯಸ್ಸು, ಈಗ ಮಾಡುತ್ತಿರುವ ಉದ್ಯೋಗ ಹಾಗೂ ಇನ್ನಿತರ ವಿವರಗಳನ್ನು ಬರೆದು, ಅರ್ಜಿಯೊಂದಿಗೆ ೫ ರೂ. ಗಳ ಅಂಚೆ ಚೀಟಿ ಲಗತ್ತಿಸಿರುವ ಸ್ವವಿಳಾಸವುಳ್ಳ ಲಕೋಟೆಯನ್ನು ನಿರ್ದೇಶಕರು, ರುಡ್‌ಸೆಟ್ ಸಂಸ್ಥೆ, ಮುಖ್ಯ ರಸ್ತೆ, ಹಿನಕಲ್, ಮೈಸೂರು ೫೭೦ ೦೧೭, ವಿಳಾಸಕ್ಕೆ ನ. ೫ ರೊಳಗೆ ಕಲುಹಿಸತಕ್ಕದ್ದು. ತರಭೇತಿಯನ್ನು ಬರುವ ನವೆಂಬರ್ ತಿಂಗಳಲ್ಲಿ ನಡೆಸಲಾಗುವುದು. ತರಬೇತಿಯ ಅವಧಿಯಲ್ಲಿ ಉಚಿತ ಊಟ ಮತ್ತು ವಸತಿ ಸೌಲಭ್ಯ ನೀಡಲಾಗುವುದು.

ತರಬೇತಿಗೆ ಪ್ರಾಥಮಿಕ ಜ್ಞಾನ ಇದ್ದವರಿಗೆ ಹಾಗೂ ತರಬೇತಿ ನಂತರ ಸ್ವ ಉದ್ಯೋಗ ಪ್ರಾರಂಭಿಸುವ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದೆಂದು ಸಂಸ್ಥೆಯ ನಿರ್ದೇಶಕರು ಪ್ರಕಟಣೆಯಲ್ಲಿ ತಿಳಿಸಿದ್ದಾರೆ.

## ಕೊಡಗು ಗೌಡ ಸಮಾಜ (ರಿ.) ಬೆಂಗಳೂರು

(ನಂ. 413 ಕಾವೇರಿ ನಗರ, ಕಾವಲ್‌ಬೈರ ಸಂದ್ರ, ಆರ್.ಟಿ. ನಗರ, ಬೆಂಗಳೂರು - 32, Ph : 3539555

ಈ ಮೇಲಿನ ಸಮಾಜವು ನವಂಬರ್ 21 ನೇ ತಾರೀಖು ಗುರುವಾರ ತನ್ನ 3 ನೇ ವಾರ್ಷಿಕ ಹುತ್ತರಿ ಹಬ್ಬವನ್ನು ಆಚರಿಸಲು ನಿರ್ಧರಿಸಿದೆ. ಈ ಸಮಾರಂಭದ ಅಂಗವಾಗಿ ಅದೇ ದಿನ ಸಾಯಂಕಾಲ 6 ಘಂಟೆಗೆ ಸರಿಯಾಗಿ ಸಾಂಸ್ಕೃತಿಕ ಕಾರ್ಯಕ್ರಮ (ನೃತ್ಯ ಹಾಡು ಮುಂತಾದವುಗಳು ಪ್ರಾರಂಭವಾಗುವುದು. ಅಲ್ಲದೆ ಕೊಡಗಿನ ಹುತ್ತರಿ ಹಬ್ಬದಲ್ಲಿ ಸಾಂಪ್ರದಾಯಿಕವಾಗಿ ನಡೆದು ಬರುತ್ತಿರುವ ಕೋಲಾಟ, ಕದಿರು ತೆಗೆಯುವಿಕೆ ಮುಂತಾದ ಕಾರ್ಯಕ್ರಮಗಳಿಂದ ಕೂಡಿರುವುದು.

ಕೊಡಗಿನ ಸರ್ವ ಗೌಡ ಜನಾಂಗ ಬಾಂಧವರಿಗೆ ಆಹ್ವಾನವನ್ನು ಕೋರುವುದಲ್ಲದೆ ಎಲ್ಲರೂ ಸಹಕರಿಸಿ ಈ ನಾಡ ಹಬ್ಬವನ್ನು ಸಾಂಗವಾಗಿ ನಡೆಸಿಕೊಡಬೇಕಾಗಿ ಸಮಾಜವು ಕೋರುತ್ತಿದೆ.

ಬೆಂಗಳೂರು, ದಿನಾಂಕ : 27-10-2002

ಪ್ರೆಸಿಡೆಂಟರು, ಹಾಗೂ
ಕಾರ್ಯಕಾರಿ ಮಂಡಳಿ, ಕೊ. ಗೌ. ಸಮಾಜ, ಬೆಂಗಳೂರು.



# 2002, ನವೆಂಬರ್ 1 ರಿಂದ 30ರ ತನಕ







| | |
|---|---|
| ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | ಕೊಡಗು ಸಂಗಾತಿ, 1055c, ದೊಡ್ಡಣ್ಣ ಬಿಲ್ಡಿಂಗ್, ಹುಣಸೂರು ರಸ್ತೆ, ಅಂಚೆ ಕಛೇರಿ ಎದುರು, ಹಿನಕಲ್ ಅಂಚೆ, ಮೈಸೂರು - 17. ಫೋನ್: **0821/404290** |
| ಮಡಿಕೇರಿಯಲ್ಲಿ ಸಂಗಾತಿ ಕಛೇರಿ ಚಿಹ್ನೆ, ಹಸೆಮಣೆ / ಶುಭಾಶಯ ಕಾರ್ಡ್ಸ್ / ಕ್ಯಾಸೆಟ್ಸ್ ಈ ಚೈನ್ ಲಭ್ಯ | ಬೈತಡ್ಕ ಜಾನಕಿ ಬೆಳ್ಯಪ್ಪ,, ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, ಫೋನ್ : **08272/228047** |
| | ಚೆರಿಯಮನೆ ರಮೇಶ್, C/o ಪಾಂಡ್ಯನ್ ಕ್ಯಾಸೆಟ್ ಅಂಗಡಿ, ಖಾಸಗಿ ಬಸ್ ನಿಲ್ದಾಣ, ಮಡಿಕೇರಿ, ಫೋನ್ : 08272/229620 |
| ವಿರಾಜಪೇಟೆ | ಬಾರಿಕೆ ಮನೋಜ್‌ಕುಮಾರ್, ಇಗ್ಗುತ್ತಪ್ಪ ಕೋಲ್ಡ್ ಸ್ಟೋರ್, ಖಾಸಗಿ ಬಸ್ ನಿಲ್ದಾಣ, ವೀರಾಜಪೇಟೆ ಫೋನ್ : 08274/456591 |
| ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೆಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/673370 |
| ಬೆಂಗಳೂರು ಮಹಾನಗರ | ಕಲ್ಲುಮುಟ್ಲು ಬಸಪ್ಪ, ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19, ಫೋನ್ : 080/6500946 |

ಚಂದಾ ವಿವರ : ಜೀವಾವಧಿ ಸದಸ್ಯತನ - **2000** ರೂ., ಬಿಡಿ ಪ್ರತಿ - **12**ರೂ.

ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ : ಕಾವೇರಿ ನೀರಿನ ಸಮಸ್ಯೆ

ನದಿಯ ನೀರು ಪ್ರಕೃತ್ತಿಯ ಕೊಡುಗೆ. ಅದನ್ನು ಈ ರಾಜ್ಯ ಇಷ್ಟೆ ಉಪಯೋಗಿಸಬೇಕು, ಇನ್ನೊಂದು ರಾಜ್ಯಕ್ಕೆ ಇಷ್ಟೆ ನೀರು ಬಿಡಬೇಕು, ಭಾರತೀಯ ನದಿಗಳ ನೀರಿನ ಬಳಕೆಯ ವಿಷಯದ್ದು ಯಾವುದೇ ಒಂದು ರಾಷ್ಟ್ರೀಯ ನೀತಿಯನ್ನು ಕೇಂದ್ರ ಸರಕಾರ ಈ ವರೆಗೂ ರೂಪಿಸದೆ ಇರುವುದರಿಂದ ಈಗ ಉದ್ಭವಿಸಿರುವ ಕಾವೇರಿ ವಿವಾದಕ್ಕೆ ಕಾರಣವಾಗಿದೆ. ಈ ರೀತಿಯ ರಾಷ್ಟ್ರೀಯ ನೀತಿಯನ್ನು ಕೇಂದ್ರ ಸರ್ಕಾರ ಆದಷ್ಟು ಬೇಗನೆ ರೂಪಿಸುವುದು ಅತೀ ಅವಶ್ಯಕವಾಗಿದೆ.

ಈ ನೀತಿಯನ್ನು ರೂಪಿಸುವಾಗ ದೇಶದಲ್ಲಿರುವ ಎಲ್ಲಾ ನದಿಗಳ ನೀರಿನ ಹರಿಯುವ ಆಯಾಮ ರಾಜ್ಯಗಳಲ್ಲಿ ಈಗಾಗಲೇ ನಿರ್ಮಿಸಿರುವ ಅಣೆ ಕಟ್ಟುಗಳ ವಿವರ, ನೀರಾವರಿ ಯೋಜನೆಗಳ ವಿವರ, ನೀರಾವರಿಯ ಸೌಲಭ್ಯ, ಬೆಳೆಯುವ ಬೆಳೆಗಳು, ಬೆಳೆಗಳ ಬೆಳೆಯುವ ಅವಧಿ, ಭವಿಷ್ಯದಲ್ಲಿ ಕಟ್ಟ ಬಹುದಾದ ಅಣೆಕಟ್ಟುಗಳು,ಮುಂತಾದವು ಗಳನ್ನೂ ಪರಿಗಣನೆಯಲ್ಲಿಟ್ಟು ಕಾರ್ಯ ರೂಪಿ ಸುವುದು ಸಮಂಜಸ. ಈ ರೀತಿಯ ಸಮಸ್ಯೆಗಳು ಭಾರತದಲ್ಲಿ ಮಾತ್ರವಲ್ಲದೆ ಬೇರೆ ದೇಶಗಳಲ್ಲೂ ಇರುವುದರಿಂದ ಅಲ್ಲಿನ ಅಂತರಾಷ್ಟ್ರೀಯ ನದಿಗಳ ಸಮಸ್ಯೆಗಳು, ನೀರಿನ ಸಮಸ್ಯೆಗಳು ಭಾರತದಲ್ಲಿ ಮಾತ್ರವಲ್ಲಬೇರೆ ದೇಶಗಳಲ್ಲೂ ಇರುವುದರಿಂದ ಅಲ್ಲಿನ ಅಂತ ರಾಷ್ಟ್ರೀಯ ನದಿಗಳ ಸಮಸ್ಯೆಗಳು, ನೀರಿನ ಸಮಸ್ಯೆಗಳು ಉದ್ಭವಿಸಿದಾಗ ಯಾವ ರೀತಿಯಲ್ಲಿ ಪರಿಹರಿಸಿ ಕೊಳ್ಳಬೇಕು ಎಂಬುದನ್ನು ನಿರೂಪಿಸಿಕೊಳ್ಳಬೇಕು. ಅಲ್ಲದೆ ನೀರಿನ ಸಮಸ್ಯೆಗಳು ಉದ್ಭವಿಸಿದಾಗ ಅವುಗಳನ್ನು ಪರಿಹರಿಸುವ ಮಾರ್ಗವೇನು? ಆ ರೀತಿಯ ಪರಿಹರಿಸಿಕೊಳ್ಳುವುದಕ್ಕೆ ಒಂದು ರಾಷ್ಟ್ರೀಯ ನ್ಯಾಯ ಮಂಡಳಿಯನ್ನು ಸ್ಥಾಪಿಸಿ ಉದ್ಭವಿಸಿದ ಸಮಸ್ಯೆಯನ್ನು ನೀಗಿಸುವುದಕ್ಕೆ ನೀರಾವರಿ ತಜ್ಞರ ನೇಮಕ ಅವಶ್ಯಕವಾಗಿದೆ. ಅದರ ಬದಲು ಸಮಸ್ಯೆ ಉದ್ಭವಿಸುವಾಗ ಮಾತ್ರ ತೊಂದರೆಯಾದ ರಾಜ್ಯ ದೇಶದ ಸುಪ್ರೀಂ ಕೋರ್ಟಿಗೆ ಮೊರೆಹೋಗಿ ಅಲ್ಲದೆ ತನ್ನ ದೂರುಗಳನ್ನು ಹೇಳಿಕೊಂಡರೆ ಅಲ್ಲಿ ಅದರ ತೀರ್ಪಿಗಾಗಿ ಕಾಯುವುದು ಸರಿಯಲ್ಲ.

ನೀರಿನ ಸಮಸ್ಯೆಯಂತಹ ಕ್ಲಿಷ್ಟ ಸಮಸ್ಯೆಗಳು ಆಯಾಯ ರಾಜ್ಯಗಳ ಅವಶ್ಯಕತೆಗಳನ್ನು ಎರಡು ರಾಜ್ಯಗಳ ಸರ್ಕಾರಗಳ ಮುಖಂಡರು ಹಾಗೂ ಅಧಿಕಾರಿಗಳು ಮತ್ತು ನೀರಾವರಿ ತಜ್ಞರ ಚರ್ಚೆಯ ಮುಖಾಂತರ ನಡೆದು ಅವುಗಳನ್ನು ಬಗೆಹರಿಸಿ ಕೊಳ್ಳಬೇಕೆ ಹೊರತು ಸಿವಿಲ್ ರೀತಿಯಲ್ಲಿ ಪರಿಹರಿಸುವುದಕ್ಕೆ ಪ್ರಯತ್ನ ಪಟ್ಟರೆ ಅದು ಸರಿಯಾಗದು. ಯಾಕೆಂದರೆ ನೀರಿನ ಸಮಸ್ಯೆಯ ಜೊತೆಯಲ್ಲಿ ಒಂದು ರಾಜ್ಯದ ಜನರು ನೆರೆ ರಾಜ್ಯಗಳಿಗೆ ಹೋಗಿ ತಮ್ಮ ಹೊಟ್ಟೆ ಪಾಡಿಗಾಗಿ ಬಂದು ನೆಲೆಸಿ ದಾಗ, ನೆಲೆಸಿದ ರಾಜ್ಯದ ಜನರು ತೊಂದರೆ ಪಡುವಾಗ ವಲಸೆ ಬಂದ ಊರಿನವರು ತಾವು ಬಂದು ನಿಂತ ಊರಿನವರೊಡನೆ ಜಗಳವಾದರೆ ಬಂದವರ ಮೇಲೆ ನೆಲೆ ನಿಂತ ಜನರು ಇವರ ಮೇಲೆ ಸೇಡು ತೀರಿಸುವ ಕ್ರಮ ಕೈಗೊಂಡಾಗ ತೊಂದರೆಯಾಗುವುದು. ಆದುದರಿಂದ ಇಂತಹ ಸಮಸ್ಯೆಗಳನ್ನು ಕೋರ್ಟುಗಳಲ್ಲಿ ತೀರ್ಮಾ ನಿಸುವ ಬದಲು ಸರಕಾರದ ಹಾಗೂ ಜನರ ಪ್ರತಿನಿಧಿಗಳಿಂದ ಕೂಡಿದ ಸಭೆಯಲ್ಲಿ ತೀರ್ಮಾನಿಸಿದರೆ ಜನರಿಗೆ ಸಮಧಾನವಾಗುವುದು. ಈ ತೀರ್ಮಾನದ ಮೇಲೆ ಯಾವುದೇ ಕೋರ್ಟಿಗೆ ಅಪೀಲು ಹೋಗುವ ಅವಕಾಶ ಇರಕೂಡದು.

ಅಲ್ಲದೆ ಈಗಿನ ಕಾವೇರಿ ನೀರಿನ ಪರಿಸ್ಥಿತಿಯಲ್ಲಿ ಕನ್ನಡ ನಾಡಿನ ರೈತರು ಮತ್ತು ತಮಿಳು ರೈತರು ಜೊತೆ ಸೇರಿ ಕುಳಿತು ಚರ್ಚಿಸಿ ಪರಸ್ಪರ ಇಂತಿಷ್ಟೆಂದು ತಮ್ಮ ತಮ್ಮಲ್ಲಿಯೇ ಹಂಚಿಕೊಳ್ಳುವ ನಿರ್ಧಾರವನ್ನು ಮನಗಾಣಬೇಕು. ಈ ಪದ್ಧತಿಯು ಬಹು ಹಿಂದಿ ನಿಂದಲೂ ಎಲ್ಲಾ ಕಡೆ ಇರುವಂತೆ ಕೊಡಗಿನ ಕಡೆ ಈಗಲೂ "ಬಾರಿ"ಯ ಮೂಲಕ ನೀರನ್ನೂ ದಿನಕ್ಕೊಬ್ಬ ರಂತೆ ಹಂಚಿ ಸಂಯಮ ಸಾಮರತೆಯಿಂದ ಮರೆಯು ದನ್ನು ನಾವಿಂದು ಕಾಣಬಹುದು. ಹೀಗಾದರೆ ಮಾತ್ರ ಕಾವೇರಿ ಪ್ರದೇಶದಲ್ಲಿ ಶಾಂತಿ ಸ್ಥಾಪಿಸಲು ಖಂಡಿತ ಸಾಧ್ಯವೆಂಬುದು ಸಂಗಾತಿಯ ದೃಢ ನಿಲುವು.

---

## ನಗರದಲ್ಲಿ ಕೊಳವೆಯೊಳಗೆ ಹುತ್ರಿ ಗೆಣಸು



ಹುತ್ರಿ ಹಬ್ಬದಲ್ಲಿ ಸಾಮಾನ್ಯವಾಗಿ ಎಲ್ಲರೂ ಕುಟುಂಬದ ಐನ್ ಮನೆಯಲ್ಲಿ ಸೇರುತ್ತಾರೆ. ಆದಿನ 9-11 ಬಗೆಯ ಅಥವಾ ಇನ್ನೂ ಹೆಚ್ಚಿನ ವಿವಿಧ ಬಗೆಯ ಸಾರು ಪಲ್ಯ ಚಟ್ನಿ ಇತ್ಯಾದಿ ತಯಾರಿಸುತ್ತಾರೆ.

ಹುತ್ರಿಗೆಣಸನ್ನು ಸಿಪ್ಪೆ ತೆಗೆದು 2-3 ಬಾರಿ ತೊಳೆದು ಬೇಯಿಸಿ ಸಾಂಬಾರು ಪಲ್ಯ ತಯಾರಿಸುವರು. ದಪ್ಪ ತುಂಡುಗಳನ್ನು ಆವಿಯಲ್ಲಿ ಉಪ್ಪು ಹಾಕಿ ಬೇಯಿಸಿ ತಿಂದರೆ ಹಸಿವನ್ನು ನೀಗಿಸುತ್ತದೆ. ಬೇಸಿಗೆ ಕಾಲದ ಒಕ್ಕಲು ಕೆಲಸದಲ್ಲಿ ನಿರತರಾಗಿದ್ದಾಗ ಇದರ ಸೇವನೆ ತುಂಬಾ ಆಪ್ಯಾಯಮಾನವಾದದ್ದು.

ಹುತ್ರಿಯಲ್ಲಿ ತಯಾರಿಸುವ ಸಾಂಬಾರು ಪಲ್ಯಗಳಲ್ಲಿ ಹುತ್ರಿಗೆಣಸಿನೊಂದಿಗೆ ಸೌತೆ ಮಿಡಿ ಚಟ್ನಿ, ಕೆಸುವಿನ ಗೆಡ್ಡೆ, ಬೀನ್ಸ್ ಕಾಳು, ಶುಂಠಿ ಚಟ್ನಿ ಮುಖ್ಯವಾಗಿರುತ್ತದೆ. ಹುತ್ರಿ ಗೆಣಸಿನಲ್ಲಿ 2
ವಿಧಗಳಿವೆ. ಸಾಮಾನ್ಯವಾಗಿ ನವಂಬರ್ ಡಿಸಂಬರ್ ತಿಂಗಳಿಗೆ ಬೆಳೆಯುವ ಈ ದಪ್ಪ ಗೆಣಸನ್ನು ಹುತ್ರಿ ಹಬ್ಬದಂದೇ ತಿನ್ನುವುದು ವಾಡಿಕೆ. ಈ ವರ್ಷದ ಹುತ್ತರಿ ಕಳೆದು ಕತ್ತರಿಸಿದ ಚಿಗುರು ಬಂದ ಗೆಡ್ಡೆಯ ತುಂಡು ಗೊಬ್ಬರ ಹಾಕಿ ದೊಡ್ಡ ಗುಂಡಿ ತೆಗೆದು ನೆಟ್ಟು, ನೀರು ಹೊಯ್ದು ಬೆಳೆಸಿದರೆ ಮುಂದಿನ ವರ್ಷಕ್ಕೆ ನಮಗೆ ಸಾಕಾಗುವಷ್ಟು ಗೆಣಸನ್ನು ಪಡೆಯಬಹುದು. ಪಟ್ಟಣಗಳಲ್ಲಿ ಕೆಲವರು 7-8 ಅಡಿ ಉದ್ದದ ಕೊಳವೆಯೊಳಗೆ ಹಾಕಿ ಬೆಳೆಸುವುದನ್ನು ನಾವಿಂದು ಕಾಣಬಹುದು. (ಚಿತ್ರ ನೋಡಿ)

ಇದರ ಜೊತೆಯಲ್ಲಿ ಇನ್ನು ಕೆಲವು ತರದ ಕಾಡು ಗೆಣಸುಗಳು ಕೂಡಾ ಇದೇ ಸಮಯದಲ್ಲಿ ಸಿಗುತ್ತವೆ. ಅದೆಂದರೆ ತೀನ ಗೆಣಸು, ಕಬುರು ಗೆಣಸು, ಮೂರ್ಕಬುರು ಗೆಣಸು, ಅಕ್ಕಿ ಗೆಣಸು ಇತ್ಯಾದಿ ಅಲ್ಲದೆ ಅಪರೂಪಕ್ಕೆ ಕಾಡಿನಲ್ಲಿ ದೊರೆಯುವ ಮಡಗಲಕಾಯಿ. ಈಚಿನ ದಿನಗಳಲ್ಲಿ ಕಾಫಿ ತೋಟದ ಅಗೆತ ಹೆರೆತ ಮರಗಳ ಕೊಂಬೆ ಕತ್ತರಿಸುವಿಕೆಯಿಂದಾಗಿ ವಿನಾಶದ ಅಂಚಿಗೆ ತಲಪಿದೆ ಎನ್ನುವ ಭಯವಿದೆ. ಆದರೆ ರೈತರು ಇಂತಹ ಅಪರೂಪದ ಮಾನವನ ಆಹಾರ ವಸ್ತುಗಳಾಗಿರುವ ಇವುಗಳನ್ನು ತಮ್ಮ ಬೇಲಿಗಳಲ್ಲೊ ಹಿತ್ತಲ ತೋಟದಲ್ಲೊ ಬೆಳೆಸಿಕೊಂಡರೆ ಅಪರೂಪದ ಸಸ್ಯ ಬಳ್ಳಿಗನ್ನು ಬೆಳೆಸಿ ಉಳಿಸಿಕೊಂಡರೆ ರೈತನ ಅಲ್ಪ ಖರ್ಚಿಗೆ ನೆರವಾಗಬಹುದೆ?

ಲೇಖನ - ಬೈತಡ್ಕ ಜಾನಕಿ

---

## ನಿಧನ

ಕುಶಾಲನಗರ ನಿವಾಸಿ ಅಮೆಗಣಪತಿಯವರು ದಿನಾಂಕ **16-10-2002** ರಂದು ಮೈಸೂರಿನ J.S.S. ಆಸ್ಪತ್ರೆಯಲ್ಲಿ ನಿಧನರಾದರು. ಶ್ರೀಯುತರು ಪತ್ನಿ ಹಾಗೂ ಇಬ್ಬರು ಪುತ್ರಿಯರನ್ನು ಅಗಲಿದ್ದಾರೆ. ಮೃತರ ಪತ್ನಿ ಅಮೆ ಕಮಲಾ ಗಣಪತಿಯವರು ಕೊಡಗು ಜಿಲ್ಲಾ ಪಂಚಾಯತ್ ಮಾಜಿ ಉಪಾಧ್ಯಕ್ಷರಾಗಿದ್ದರು.

*ವರದಿ : ಕುಂಭಗೌಡನ ಸೋಮಣ್ಣ*

## ಸೌಂದರ್ಯರಾಣಿ "ಗೌರಿ ಹೂ"

ಬೇಸಿಗೆಯ ನಂತರ ಬರುವ ಹೊಸ ಮಳೆ ಎಲ್ಲರಿಗೂ ಹರ್ಷ, ಮಳೆಗಾಲ ಎಂದರೆ ಪ್ರಕೃತಿಯ ಮರಗಳು ಮತ್ತೆ ಹಚ್ಚ ಹಸುರಾಗಿ ಕಾಣುತ್ತವೆ. ಅಂತೆಯೇ ಹೊಸ ಮಳೆ ಭೂಮಿಗೆ ಬಿದ್ದ ನಂತರ ಗೌರಿ ಹೂವಿನ ಗಿಡವು 4,5 ಮೀಟರ್ ಎತ್ತರಕ್ಕೆ ಬೆಳೆಯುತ್ತದೆ. ಅರೆಗನ್ನಡದಲ್ಲಿ "ಗೌರಿ ಹೂ" ಎಂದೆ ಪ್ರಖ್ಯಾತಿ. ಇದಕ್ಕೆ ಕನ್ನಡದಲ್ಲಿ ಅಗ್ನಿ ಶಿಖಿ ಅಕ್ಕ ತಂಗಿ ಬಳ್ಳಿ, ಅಂತೆಯೇ ಕೊಡವ ಭಾಷೆಯಲ್ಲಿ "ತೋಕ್ ಪೂ" ಸಂಸ್ಕೃತದಲ್ಲಿ "ಅಗ್ನಿ ಮುಖಿ" ಹಿಂದಿಯಲ್ಲಿ "ಕಲಹಾರಿ" ಎಂದು ಕರೆಯುತ್ತಾರೆ. ಕಿತ್ತಳೆ, ಹಳದಿ ಮತ್ತು ಕೆಂಪು ಬಣ್ಣದಿಂದ ಕೂಡಿದ ಈ ಹೂ ನೋಡಲು ಬಹಳ ಸುಂದರವೂ, ಆಕರ್ಷಮಯವು ಆಗಿದೆ. ಸಸ್ಯದ ಕಾಂಡವು ಚಿಕ್ಕದಾದ ಎಲೆಯ ಕಾಂಡಕ್ಕೆ ಅಂಟಿಕೊಂಡು ಅಲಂಕಾರಕ್ಕಾಗಿ ಬೆಳೆಸುವ ಹೂಗಳಿಗಿಂತ ವಿಚಿತ್ರ ಭಿನ್ನವಾಗಿರುತ್ತವೆ. ಎಲೆಯ ತುದಿ ಬಳ್ಳಿಯಂತೆ ಮಾರ್ಪಾಡು ಹೊಂದಿರುತ್ತದೆ.

ಈ ಹೂ ಲಿಲಿಯೇಸಿ ಕುಟುಂಬಕ್ಕೆ ಸೇರಿದ ಸಸ್ಯ. ಈ ಗಿಡದ ಮೂಲ ಉಷ್ಣ ವಲಯದಾದರೆ ಎಲ್ಲಾ ಹವಮಾನಕ್ಕೂ



ಒಗ್ಗಿ ಬೆಳೆಯುತ್ತದೆ. ಈ ಗಿಡದ ಕಾಂಡದ ತುಂಡನ್ನು ನೆಟ್ಟರೆ ಬದುಕುವುದಿಲ್ಲ. ಇದರ ಗೆಡ್ಡೆಯು ಇದರ ಭಿತ್ತನೆಯ ಬೀಜವಾಗಿದೆ. ಗಿಡದ ಗೆಡ್ಡೆಯೂ ವಿಷ ಭರಿತದಿಂದ ಕೂಡಿರುತ್ತದೆ. ವಿಷ ಭರಿತ ಹುಳುಗಳು ಕಚ್ಚಿದಾಗ ಹೊರ ಭಾಗಕ್ಕೆ ಗೆಡ್ಡೆಯನ್ನು ಕಡಿದ ಸ್ಥಳಕ್ಕೆ ಹಚ್ಚುತ್ತಾರೆ. ಅಲ್ಲದೆ ಮೂಲವ್ಯಾಧಿ, ಜಂತು ಹುಳು, ಕುಷ್ಟ, ಹೊಟ್ಟೆನೋವು, ತಲೆಯಲ್ಲಿರುವ ಹೇನನ್ನು ನಿಯಂತ್ರಿಸಬಲ್ಲದು.

ಹೊಸ ಮಳೆಯಲ್ಲಿ ಚಿಗುರುಗೊಂಡ ಬಳ್ಳಿಯ ವರುಷದ ಕೊನೆ ತಿಂಗಳಲ್ಲಿ ಬಳ್ಳಿಯೂ ಸಾಯುತ್ತದೆ. ಪುನಃಹ ಹೊಸ ಮಳೆ ಬಂದು ನೀರು ಭೂಮಿಯನ್ನೂ ಸ್ಪರ್ಶಿಸಿದಾಗ ಮತ್ತೆ ಚಿಗುರುವುದು ಈ ಸೌಂದರ್ಯ ರಾಣಿ "ಗೌರಿ ಹೂ"

ಬರಹ: ಸುನಿಲ್ ಕುಯ್ಯುಮುಡಿ, ಭಾಗಮಂಡಲ.

---

ಮೃತ್ಯು ಎದುರಾದಾಗ ಜ್ಞಾನಿ ನಗುತ್ತಾನೆ, ಅಜ್ಞಾನಿ ಅಳುತ್ತಾನೆ

---

# ಕೊಡಗು ಗೌಡರು ಎರಡನೇ ದರ್ಜೆ ಪ್ರಜೆಗಳಲ್ಲ : ಅಮೆ ಹಿಮಾಲಾಕ್ಷಿ ಕಾಳಪ್ಪ

## ಕೊಡಗು ಗೌಡ ವಿದ್ಯಾ ಸಂಘದಿಂದ ಪ್ರತಿಭಾ ಪುರಸ್ಕಾರ, ಸನ್ಮಾನ ಸಮಾರಂಭ.

ವಿದ್ಯೆ ಕಲಿತರಷ್ಟೇ ಸಾಲದು ಜನರು ಸುಸಂಸ್ಕೃತಿಯನ್ನೂ ಬೆಳೆಸಿಕೊಳ್ಳಬೇಕು. ಹಳ್ಳಿಗಳಲ್ಲಿರುವ ನಮ್ಮ ಜನಾಂಗದಲ್ಲಿ ನಿಜಕ್ಕೂ ಸಂಸ್ಕೃತಿ ಶ್ರೀಮಂತವಾಗಿದೆ. ಆದುದರಿಂದ ನಾವು ಎರಡನೇ ದರ್ಜೆ ಪ್ರಜೆಗಳೆಂಬ ಕೀಳು ಭಾವನೆಯನ್ನು ತೊರೆದು ಮುಂದೆ ಸಾಗಬೇಕೆಂದು ಬೆಂಗಳೂರು ವಿ.ವಿ. ಪುರ ಕಾನೂನು ಕಾಲೇಜಿನ ಪ್ರಾಂಶುಪಾಲೆ ಅಮೆ ಹಿಮಾಲಾಕ್ಷಿ ಕಾಳಪ್ಪನವರು ಕರೆ ನೀಡಿದರು. ಅವರು ಸೆಪ್ಟಂಬರ್ 29 ರಂದು ಮಡಿಕೇರಿ ಕೊಡಗು ಗೌಡ ವಿದ್ಯಾಸಂಘದ ಆಶ್ರಯದಲ್ಲಿ ನಡೆದ ಪ್ರತಿಭಾ ಪುರಸ್ಕಾರ ಮತ್ತು ಸನ್ಮಾನ ಸಮಾರಂಭವನ್ನುದ್ದೇಶಿಸಿ ಮಾತನಾಡುತ್ತಾ ಬೇಸಾಯಗಾರರಾಗಿರುವ ಗೌಡ ಜನಾಂಗದವರು ವಿದ್ಯೆಯನ್ನು ಯಾವ ಕಾರಣಕ್ಕೂ ನಿರ್ಲಕ್ಷಿಸಬಾರದು, ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡುವುದರಿಂದ ಮಾತ್ರ ಸಮಾಜೋದ್ಧಾರ ಸಾಧ್ಯವಾಗುತ್ತದೆಂದು ಅಭಿಪ್ರಾಯಪಟ್ಟರು. ನಮ್ಮ ಜನಾಂಗ ದಲ್ಲಿ ಕೆಲವೇ ಜನರಿಗೆ ಮಾತ್ರ ಉನ್ನತ ಸ್ಥಾನ ಪಡೆಯಲು ಸಾಧ್ಯವಾಗಿದೆ ಎಂದು ವಿಷಾದಿಸಿದ ಅವರು, ಪ್ರಸ್ತುತ ದೊರೆಯುತ್ತಿರುವ ಸವಲತ್ತುಗಳನ್ನೂ ಸದುಪಯೋಗ ಪಡಿಸಿ ಕೊಂಡು ಜನಾಂಗ ಮುಂದುವರಿಯಬೇಕೆಂದು ಸಲಹೆ ನೀಡಿದರು.

ಇದಕ್ಕೂ ಮೊದಲು ಸಮಾರಂಭವನ್ನು ಉದ್ಘಾಟಿಸಿ ಮಾತನಾಡಿದ ಕೊಡಗು ಜಿಲ್ಲಾ ಪಂಚಾಯಿತಿ ಮಾಜಿ ಅಧ್ಯಕ್ಷ ಊರು ಬೈಲು ಜಯ ಪ್ರಕಾಶರವರು ನಮ್ಮ ಸಂಘ ಸಂಸ್ಥೆಗಳಲ್ಲಿ ಯುವಕರಿಗೆ ಪ್ರಾತಿನಿಧ್ಯ ನೀಡುವುದರಿಂದ ಶೀಘ್ರವಾಗಿ ಮುಂದುವರೆಯಲು ಸಾಧ್ಯವಾಗುತ್ತದೆಂದರಲ್ಲದೆ, ವಿದ್ಯಾ ಸಂಘದ ಪ್ರೋತ್ಸಾಹ, ಸಹಕಾರಗಳನ್ನೂ ಸ್ಮರಿಸಿಕೊಂಡರು, ಸಮಾರಂಭದಲ್ಲಿ ಪ್ರಾಸ್ತಾವಿಕವಾಗಿ ಮಾತನಾಡಿದ ವಿದ್ಯಾ ಸಂಘದ ಉಪಾಧ್ಯಕ್ಷ ಸೂರ್ತಲೆ ಸೋಮಣ್ಣನವರು ವಿದ್ಯಾಸಂಘ ನಡೆದು ಬಂದ ದಾರಿಯನ್ನು ಹಾಗೂ ವಿದ್ಯಾ ನಿಧಿಯ ಸ್ಥಾಪನೆಯ ಹಿನ್ನಲೆಯನ್ನೂ ಮೆಲುಕು ಹಾಕಿದರು. ಸುಪ್ತ ಪ್ರತಿಭೆಗಳನ್ನು ಮೇಲೆತ್ತುವುದೇ ಕಾರ್ಯಕ್ರಮದ ಉದ್ದೇಶವೆಂದು ಸಾರಿದರು. ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದ, ವಿದ್ಯಾ ಸಂಘದ ಹಾಲಿ ಅಧ್ಯಕ್ಷರೂ ಆಗಿರುವ ಹೊಸೂರು ರಮೇಶ್ ಜೋಯಪ್ಪನವರು ಮಾತನಾಡಿ, ವಿದ್ಯಾ ಸಂಘ ಯಾವುದೇ ಸಂಸ್ಥೆಗಳೊಡನೆ ಪೈಪೋಟಿಗಿಳಿಯದೆ ನಮ್ಮ ಮಕ್ಕಳನ್ನು ಪ್ರೋತ್ಸಾಹಿಸುವ ಉದ್ದೇಶವನ್ನು ಮಾತ್ರ ಹೊಂದಿದೆಯೆಂದರಲ್ಲದೆ ಮುಂದಿನ ವರ್ಷದಿಂದ ಕಲಾ, ವಿಜ್ಞಾನ, ವಾಣಿಜ್ಯ ವಿಭಾಗಗಳಿಗೆ ಪ್ರತ್ಯೇಕ ಪುರಸ್ಕಾರಗಳನ್ನು ನೀಡಲಾಗುವುದೆಂದು ತಿಳಿಸಿ, ಮೈಸೂರಿನಲ್ಲಿರುವ ನಮ್ಮ ಶಾಖೆಯ ವಸತಿ ನಿಲಯದ ಸದುಪಯೋಗ ಪಡಿಸಿಕೊಳ್ಳು ವಂತೆ ಜನಾಂಗದ ವಿದ್ಯಾರ್ಥಿಗಳಿಗೆ ಕರೆ ನೀಡಿದರಲ್ಲದೆ, ವಿದ್ಯಾರ್ಥಿಗಳು ಪಾಠ ಮತ್ತು ಪಠ್ಯೇತರ ವಿಷಯಗಳಲ್ಲಿಯೂ ಉನ್ನತ ಸಾಧನೆಗೈಯ್ಯುವಂತೆ ಕರೆ ನೀಡಿದರು.

ಕೊಡಗು ಗೌಡ ವಿದ್ಯಾ ಸಂಘದ ವತಿಯಿಂದ ರಾಷ್ಟ್ರ ಶಿಕ್ಷಕ ಪ್ರಶಸ್ತಿ ಪಡೆದ ಕೊಡಗಿನ ಪ್ರಥಮ ಮಹಿಳೆ ತೆಕ್ಕಡೆ ಜಯಶೀಲಾ ಮುತ್ತಣ್ಣನವರನ್ನು ಸನ್ಮಾನಿಸಲಾಯಿತು. ಸನ್ಮಾನ ಸ್ವೀಕರಿಸಿ ಮಾತನಾಡಿದ ಜಯಶೀಲಾರವರು ವಿದ್ಯೆಯೆಂದರೆ ಮಾನವನ ಸರ್ವತೋಮುಖ ಬೆಳವಣಿಗೆಗೆ ಪೂರಕವಾದುದು. ವಿದ್ಯಾರ್ಥಿಗಳು ಶಿಕ್ಷಕರು ಮತ್ತು ಪೋಷಕರು ಒಂದಾಗಿ ಶ್ರಮಿಸಿದಾಗ ಪರಿಪೂರ್ಣತೆ ಸಾಧಿಸಲು ಸಾಧ್ಯವಾಗುತ್ತದೆ. ವಿದ್ಯಾರ್ಥಿಗಳಲ್ಲಿ ಶಿಸ್ತು, ದೇಶಪ್ರೇಮ, ಭಕ್ತಿ ಭಾವನೆಗಳನ್ನೂ ಬೆಳೆಸಿ ಅವರ ಅಭಿವ್ಯಕ್ತಿಗೆ ತಕ್ಕಂತೆ ವಿದ್ಯೆ ನೀಡಬೇಕೆಂದರಲ್ಲದೆ, ತ್ಯಾಗ ಭಕ್ತಿ ಶಿಸ್ತು, ವಿವೇಚನೆ, ನಿಸ್ವಾರ್ಥ ಈ ಪಿಡುಗುಗಳನ್ನೂ ಮೈಗೂಡಿಸಿಕೊಳ್ಳಬೇಕೆಂದರು.

ವೇದಿಕೆಯಲ್ಲಿ ನಿವೃತ್ತ ಶಿಕ್ಷಣಾಧಿಕಾರಿ ಕೊಂಪುಳಿರ ಆನಂದರವರು, ನಿವೃತ್ತ ಶಿಕ್ಷಕ ಚೀಯಂಡಿ ಯಾದವರವರು, ಉದ್ಯಮಿ ಎನ್. ಪಿ. ಆನಂದರವರು ಉಪಸ್ಥಿತರಿದ್ದು ಸಮಾರಂಭವನ್ನುದ್ದೇಶಿಸಿ ಮಾತನಾಡಿದರು. ಇದೇ ಸಂದರ್ಭದಲ್ಲಿ ಗೌಡ ಜನಾಂಗದ ಮೇರು ವ್ಯಕ್ತಿಗಳಾದ ಕುಂಭ ಗೌಡನ ಕುಶಾಲಪ್ಪನವರ ಭಾವಚಿತ್ರವನ್ನು ಪಂಜಿಪಳ್ಳ ವೆಂಕಪ್ಪನವರು, ನಿಡ್ಯಮಲೆ ಮುದ್ದಪ್ಪನವರ ಭಾವಚಿತ್ರವನ್ನು ಚೆರಿಯಮನೆ ಪೊನ್ನಪ್ಪನವರ ಭಾವಚಿತ್ರವನ್ನು ಶ್ರೀ ದಂಬೇಕೋಡಿ ಸೂದನ ನಾಣಯ್ಯನವರು ಅನಾವರಣ ಗೊಳಿಸಿದರು. ವಿದ್ಯಾ ಸಂಘದ ಸಭಾಂಗಣದಲ್ಲಿ ನೂತನವಾಗಿ ಆರಂಭಗೊಳ್ಳಲಿರುವ ಗ್ರಂಥಾಲಯವನ್ನೂ ಸೂದನ ಈರಪ್ಪನವರು ಉದ್ಘಾಟಿಸಿದರು.

1908 ರಲ್ಲಿ ಕೇವಲ 30 ಜನ ಸದಸ್ಯರಿಂದ ಆರಂಭಗೊಂಡ ಕೊಡಗು ಗೌಡ ವಿದ್ಯಾ ಸಂಘ ಇಂದು ಸುಮಾರು 2,387 ಸದಸ್ಯರನ್ನೂ ಹೊಂದಿದೆ. 1976ರಲ್ಲಿ ಪಟ್ಟಡ ಪ್ರಭಾ ಕರ ರವರು ನೀಡಿದ 1,000 ರೂ.ಗಳಿಂದ ಆರಂಭಗೊಂಡ ವಿದ್ಯಾ ನಿಧಿ ಎರಡು ಲಕ್ಷದ ಎಂಬತ್ತು ಸಾವಿರ ರೂ.ಗಳನ್ನು ಮುಟ್ಟಿದೆ ಎಂದು ಘೋಷಿಸಲ್ಪಡುತ್ತಿದ್ದಂತೆ ಹಲವಾರು ದಾನಿಗಳು ಸ್ಥಳದಲ್ಲೇ ದೇಣಿಗೆಯನ್ನು ನೀಡತೊಡಗಿದರು. ಪೊನ್ನಚ್ಚನ ಸೋಮಣ್ಣ ಮತ್ತು ಬೆಪ್ಪುರನ ಮೇದಪ್ಪನವರು ವಿದ್ಯಾದಾನಿಗಳ ಹೆಸರುಗಳನ್ನೂ ವಾಚಿಸಿದರು. ಕಾರ್ಯಕ್ರಮ ಕಾಳೇರಮ್ಮನ ದರ್ಶನ್ ಮತ್ತು ಮಂಞಂಡ್ರ ಮಿಲನ ಉಲ್ಲಾಸ್‌ರವರ ಪ್ರಾರ್ಥನೆಯೊಂದಿಗೆ ಆರಂಭಗೊಂಡಿತು. ಕೋಡಿ ಚಂದ್ರಶೇಖರ್ ಸ್ವಾಗತಿಸಿದರೆ ಪರ್ಲಕೋಟಿ ಕಾಂತರವರು ವಂದಿಸಿದರು. ಕಾರ್ಯದರ್ಶಿ ಬಡ್ಡಡ್ಕ ವಿದ್ಯಾಧರ ಕಾರ್ಯಕ್ರಮ ನಿರೂಪಿಸಿದರು.

ವರದಿ : ಸಂಗಾತಿ

---

ಕೂಡಿದೆಡೆಯಲ್ಲಿ ಕಪಟನೆಣಿಸುವವ ದ್ರೋಹಿ

೨. ಕುಮಾರಿ ಕಸ್ಪಾಡಿ ಪಿ. ರೀನಾ, ಭಾರತಿ ಪದವಿಪೂರ್ವ ಕಾಲೇಜು, ಮರಗೋಡು

**ರಾಷ್ಟ್ರ ಮಟ್ಟದ ವಿಜ್ಞಾನ ಪರೀಕ್ಷೆ**

೩. ಕುಮಾರಿ ಪರ್ಲಕೋಟಿ ಜೆ ಶ್ರುತಿ
(ರಾಷ್ಟ್ರ ಮಟ್ಟದ ಹಾಕಿ)

೪. ಕುಮಾರಿ ಪೊನ್ನಚ್ಚನ ಎಸ್. ಸುಮತಿ
(ರಾಷ್ಟ್ರ ಮಟ್ಟದ ಬಾಲ್ ಬ್ಯಾಡ್ ಮಿನ್ಟನ್)

೫. ಕುಮಾರ್ ಕೋಚನ ಬಿ. ತೇಜ
(ರಾಷ್ಟ್ರ ಮಟ್ಟದಲ್ಲಿ ಅಂತಸ್ಸರ್ವವಿದ್ಯಾಲಯ ಅಥ್ಲೆಟಿಕ್ಸ್)

೬. ಕುಮಾರ್ ಕುಂಬಗೌಡನ ಆರ್ ನಿತಿನ್ ಚಂದ್
(ರಾಜ್ಯ ಮಟ್ಟದ ಕರಾಟೆ)

**ವಿಶೇಷ ಸಾಧನೆಗೆ ಪುರಸ್ಕಾರ**

೧. ಕುಮಾರಿ ಸಿರಕಜೆ ವೀಣಾ ಕುಮಾರಿ
(ಅಂಧರಾಗಿದ್ದರೂ ಬಿ. ಎ.ಪದವಿಯಲ್ಲಿ 71% ಅಂಕ ಗಳಿಕೆ)

೨. ಕುಮಾರ್ ಅಚ್ಚಪಟ್ಟಿ ರಾಜೇಶ್, ೧ನೇ ಮೊಣ್ಣಂಗೇರಿ ಗ್ರಾಮ.
(ಐ.ಟಿ.ಐ.ಯಲ್ಲಿ ರಾಜ್ಯ ಮಟ್ಟದಲ್ಲಿ ಪ್ರಥಮ ರ್‍ಯಾಂಕ್)

೩. ಶ್ರೀ ಕಟ್ಟೆಕೋಡಿ ಗಣೇಶ್, ಕರಿಕೆ ಗ್ರಾಮ
(ಎಂ. ಎ. ಇತಿಹಾಸ ವಿಭಾಗದಲ್ಲಿ ಮಂಗಳೂರು ವಿಶ್ವ ವಿದ್ಯಾಲಯದಲ್ಲಿ ೩ನೇ ರ್‍ಯಾಂಕ್)

೪. ಕುಮಾರ್ ಪೊನ್ನಚ್ಚನ ಕೆ. ಶ್ರೀನಿವಾಸ್ ಮಡಿಕೇರಿ
(ಬಿ. ಪಿ. ಎಡ್‌ನಲ್ಲಿ ಮೈಸೂರು ವಿಶ್ವ ವಿದ್ಯಾಲಯದ ಮೊದಲನೇ ರ್‍ಯಾಂಕ್)

## ಕೊಡಗಿನ ಅರ್ಜುನ ಹಾಲಪ್ಪ ನಾಯಕತ್ವದ ಭಾರತ ರಾಷ್ಟ್ರೀಯ (ಎ) ತಂಡಕ್ಕೆ ಜಯ

ಈಜಿಪ್ಟಿನ ಕೈರೊದಲ್ಲಿ ನಡೆದ ನಾಲ್ಕು ರಾಷ್ಟ್ರಗಳ ಹಾಕಿ ಚಾಂಪಿಯನ್‌ಷಿಪ್ ಪಂದ್ಯಾಟದಲ್ಲಿ ಅಂತಿಮವಾಗಿ ಸೋಮವಾರ ಪೇಟೆಯ ಅರ್ಜುನ್ ಹಾಲಪ್ಪ ನಾಯಕತ್ವದ ಭಾರತ ರಾಷ್ಟ್ರೀಯ (ಎ) ತಂಡವು ಫ್ರಾನ್ಸ್ ಅನ್ನು 3-1 ಗೋಲುಗಳ ಅಂತರದಿಂದ ಮಣಿಸಿ ಚಾಂಪಿಯನ್ ಷಿಪ್ ಪಡೆದುಕೊಂಡಿದೆ. ಅಕ್ಟೋಬರ್ 10 ರಿಂದ ಆರಂಭವಾದ ಲೀಗ್ ಮಾದರಿಯ ಈ ಪಂದ್ಯಾಟದಲ್ಲಿ ಜರ್ಮನಿ, ಫ್ರಾನ್ಸ್, ಈಜಿಪ್ಟ್ ಪಾಕಿಸ್ತಾನ ಇನ್ನಿತರ ತಂಡಗಳು ಭಾಗವಹಿಸಿದ್ದವು. ಸೆಮಿ ಫೈನಲ್‌ನಲ್ಲಿ ಪಾಕಿಸ್ತಾನವನ್ನು ಭರ್ಜರಿ 3-0 ಗೋಲುಗಳ ಅಂತರದಿಂದ ಭಾರತ ತಂಡವು ಪರಾಜಯಗೊಳಿಸಿತು.

ಅರ್ಜುನ್ ಹಾಲಪ್ಪನವರ ಈ ಸಾಧನೆಯು ಕೊಡಗಿಗೆ ಹೆಮ್ಮೆ ತಂದಿದೆ.

## ರಾಮಾ ! ಕೃಷ್ಣಾ !

ಒಂದೂರಿನಲ್ಲಿ ಸಂಸಾರವಂದಿಗನಾದ ಒಬ್ಬ ಬಡ ಮುದುಕನಿದ್ದನು. ವೃದ್ಧಾಪ್ಯದ ದೆಸೆಯಿಂದ ಆತನಿಗೆ ಕೆಲಸ ಮಾಡಲು ಸಹ ಆಗುತ್ತಿರಲಿಲ್ಲ. ಅವನು ಯಾವಾಗಲೂ ನಿದ್ದೆಯಿಂದ ಎಚ್ಚೆತ್ತ ಕೂಡಲೇ ರಾಮಾ! ಕೃಷ್ಣಾ! ಎಂದು ದೇವರ ನಾಮಸ್ಮರಣೆ ಮಾಡುವುದೊಂದು ವಾಡಿಕೆ. ಇದರಿಂದ ಉಳಿದವರಿಗೆ ನಿದ್ರಾಭಂಗವಾಗುತ್ತಿತ್ತು. ಅವರು ಇದೊಂದು ಹಾಳು ಮುದುಕ, ಸುಮ್ಮನೆ ಬಾಯಿ ಬಡಿಯದೆ ಕೊಟ್ಟದ್ದನ್ನು ತಿಂದುಕೊಂಡು ಒಂದು ಕಡೆ ಬಿದ್ದಿರಬಾರದೇ, ಎಂದು ಗೊಣಗುಟ್ಟುತ್ತಿದ್ದರು.

ಹೀಗಿರಲು ಒಂದು ದಿವಸ ರಾತ್ರಿ ರಾಮ ಮತ್ತು ಕೃಷ್ಣರೆಂಬ ಕಳ್ಳರು ಅವರ ಮನೆಯ ಸಮೀಪಕ್ಕೆ ಬಂದಿದ್ದರು. ಅವರಲ್ಲಿ ಪರ ಊರಿನ ಶ್ರೀಮಂತರೊಬ್ಬರ ಮನೆಯಿಂದ ಅಪಹರಿಸಿ ತಂದಿದ್ದ ಬಂಗಾರದ ಒಡವೆಗಳ ಕಟ್ಟೊಂದಿತ್ತು. ವಾಡಿಕೆಯಂತೆ ಅವರು ಆ ಬಂಗಾರವನ್ನು ತಮ್ಮಿಬ್ಬರೊಳಗೆ ಸಮವಾಗಿ ಹಂಚಿಕೊಳ್ಳಲು ಕುಳಿತರೆನ್ನುವಷ್ಟರಲ್ಲಿ ಆ ಮುದುಕನು ಅಕಸ್ಮಾತ್ ಎಚ್ಚೆತ್ತು ರಾಮಾ! ಕೃಷ್ಣಾ! ಎಂದುಗಟ್ಟಿಯಾಗಿ ನರಳುತ್ತಾ ಕೂಗಿದನು. ಆಗ ಕಳ್ಳರು ಈ ಮನೆಯ ಮುದುಕಪ್ಪನಿಗೆ ನಮ್ಮ ವಿಷಯ ತಿಳಿದಿದೆ. ಇನ್ನು ನಮಗೆ ಉಳಿಗಾಲವಿಲ್ಲವೆಂದು ಒಮ್ಮೆಗೆ ಭಯಬಿದ್ದು ಕಿರುಚಿದರು. ಆಗ ಕಿರುಚಿದ ಶಬ್ದವನ್ನು ಕೇಳಿದ ಮನೆಯವರು ಎಚ್ಚರವಾಗಿ ದೀಪ ಹಿಡಿದುಕೊಂಡು ಕಳ್ಳರಿದ್ದೆಡೆಗೆ ಓಡಿ ಬಂದರು. ಕಳ್ಳರು ಬದುಕಿದರೆ ಸಾಕು ಎಂದುಕೊಂಡು ತಾವು ತಂದಿದ್ದ ಬಂಗಾರದ ಒಡವೆಗಳನ್ನು ಅಲ್ಲೇ ಮರೆತು ಬಿಟ್ಟು ತಮ್ಮ ತಮ್ಮ ಕಾಲುಗಳಿಗೆ ಬುದ್ಧಿ ಹೇಳಿದರು. ಮನೆಯವರು ಬಂದು ನೋಡುತ್ತಾರೆ ಅಲ್ಲಿ ಒಡವೆಗಳ ಒಂದು ರಾಶಿಯೇ ಬಿದ್ದಿದೆ ಏನಾಶ್ಚರ್ಯ ?

ತಾವು ಶಪಿಸುತ್ತಿದ್ದ ಮುದುಕಪ್ಪನ ರಾಮಾ! ಕೃಷ್ಣಾ! ಎಂಬ ವಾಣಿಯೇ ತಮಗೆ ಇಷ್ಟು ಸಂಪತ್ತನ್ನು ತಂದು ಕೊಟ್ಟಿತೆಂದುಕೊಂಡರು. ಅಂದಿನಿಂದ ಅವರೆಲ್ಲರೂ ಆ ಮುದುಕಪ್ಪನನ್ನು ನಿಜವಾಗಿಯೂ ಅತ್ಯಂತ ಪ್ರೀತಿಯಿಂದ ಕಾಣುತ್ತಿದ್ದರು. ಹಣ ಸಂಪತ್ತು ನಮ್ಮಲ್ಲಿದ್ದರೆ ಪ್ರೀತಿಯೂ ಅನಿವಾರ್ಯವಾಗಿ ಇರುತದಲ್ಲವೆ?

-ಕುಂಬನ ರೇಖಾ ಬಾಲಕೃಷ್ಣ, ವಿರಾಜಪೇಟೆ.

## ನುಡಿ ಮುತ್ತುಗಳು

1. ಶ್ರೀಮಂತನು ದೇವರನ್ನು ತನ್ನ ಕಿಸೆಯಲ್ಲಿಟ್ಟು ಕೊಳ್ಳುತ್ತಾನೆ. ವಿದ್ವಾಂಸ ತನ್ನ ಮೈದುಳಿನಲ್ಲಿಟ್ಟುಕೊಳ್ಳುತ್ತಾನೆ. ಆದರೆ ಬಡವ ತನ್ನ ಹೃದಯದಲ್ಲಿಟ್ಟುಕೊಳ್ಳುತ್ತಾನೆ. - ಅಲೆಕ್ಸಾಂಡರ್ ಸ್ಮಿತ್
2. ದಾನವಾಗಿ ನೀಡಲ್ಪಟ್ಟದ್ದು ಎಂದಾದರೊಂದು ದಿನ ನಿಮಗೆ ಹಿಂದಿರುಗುತ್ತದೆ. ಬಚ್ಚಿಟ್ಟರೆ ಅದು ಎಂದಾರೊಂದು ದಿನ ಪರರ ಪಾಲಾಗುತ್ತದೆ. - ವಚನ ಸಾಹಿತ್ಯ

(ಸಂಗ್ರಹ) - ಪಬ್ಬಂಡ್ರ ಶರತ್ ಕುಮಾರ್, ಮಕ್ಕಂದೂರು.

ತುತ್ತು ತಪ್ಪಿದರೆ, ತೂಕ ತಪ್ಪಿತು

ಇದೇ ಸಂದರ್ಭದಲ್ಲಿ ವಿವಿಧ ಕ್ಷೇತ್ರಗಳಲ್ಲಿ ಸಾಧನೆಗೈದ ಹಲವು ಪ್ರತಿಭೆಗಳನ್ನು ಪುರಸ್ಕರಿಸಲಾಯಿತು.

**ಪ್ರತಿಭಾ ಪುರಸ್ಕಾರ ವಿಜೇತರು -2002**

**7 ನೇ ತರಗತಿ ಗ್ರಾಮೀಣ**

೧. ಕುಮಾರಿ ಕುಕ್ಕನೂರು ಎಸ್.ಲಿವ್ಯಾ
ಸಿದ್ದಾಪುರ ಕಾನ್ವೆಂಟ್ - ೯೬.೩೩%

೨. (ಕುಮಾರ) ಕುರ್‌ನೇರಿ ಕೀರ್ತನ್
ಸಿದ್ದಾಪುರ ಕಾನ್ವೆಂಟ್- ೯೫.೬೭%

೩. ಕುಮಾರ್ ಹೊದ್ದೆಟ್ಟಿ ಎನ್. ಗಿರೀಶ್
ಪ್ರಾಥಮಿಕ ಶಾಲೆ, ಕರಿಕೆ. - ೬೩.೦೦%

***ನಗರ ಪ್ರದೇಶ:***

೧. ಕುಮಾರಿ ಉಡುದೋಳಿ ಆರ್. ಪ್ರೀತು
ಸ್ಟೈಂಟ್ ಜೋಸೆಫ್ಸ್ ಕಾನ್ವೆಂಟ್ ಮಡಿಕೇರಿ - ೯೬.೧೭%

೨. ಕುಮಾರಿ ಕಟ್ರತನ ಟಿ ರಾಜಶ್ರೀ
ಸ್ಟೈಂಟ್ ಜೋಸೆಫ್ಸ್ ಕಾನ್ವೆಂಟ್ ಮಡಿಕೇರಿ - ೯೬.೦೦%

೩. ಕುಮಾರ್ ಅಚ್ಚುಡ ಎ.ಹೃತಿಕ್
ಸ್ಟೈಂಟ್ ಜೋಸೆಫ್ಸ್ ಕಾನ್ವೆಂಟ್ ಮಡಿಕೇರಿ - ೯೫.೬೭%

***ಎಸ್. ಎಸ್.ಎಲ್. ಸಿ. : ಗ್ರಾಮೀಣ***

೧. ಕುಮಾರ್ ಬೊಳ್ತಜಿರ ಎಲ್.ಪೃಥ್ವಿಕುಮಾರ್
ಪ್ರೌಢ ಶಾಲೆ, ಚೆಟ್ಟಳ್ಳಿ - ೮೭.೦೪%

೨. ಕುಮಾರಿ ನಿಡುಬೆ ಟಿ ವಾಣಿ
ಕಾವೇರಿ ಪದವಿಪೂರ್ವ ಕಾಲೇಜು,
ಭಾಗಮಂಡಲ - ೯೬.೮೦%

೩. ಕುಮಾರ್ ಪರ್ಲಕೋಟಿ ಯು ಹೇಮಂತ್
ಮದೆ ಮಹೇಶ್ವರ ಶಾಲೆ, ಮದೆನಾಡು

**ಎಸ್.ಎಸ್. ಎಲ್. ಸಿ : ನಗರ ಪ್ರದೇಶ**

೧. ಕುಮಾರಿ ಪೂಜಾರಿರ ಪೂರ್ಣಿಮಾ
ಬ್ಲಾಸಮ್ಸ್ ಮಡಿಕೇರಿ - ೯೩.೬೦%

೨. ಕುಮಾರಿ ಮೇರ್ಕಜೆ ಬಿ ಚೇತನ
ಸ್ಟೈಂಟ್ ಜೋಸೆಫ್ಸ್ ಮಡಿಕೇರಿ - ೯೩.೧೭%

೩. ಕುಮಾರಿ ಕೆದಂಬಾಡಿ ಕೆ. ಕೃತ್ತಿಕಾ
ಸ್ಟೈಂಟ್ ಜೋಸೆಫ್ಸ್ ಮಡಿಕೇರಿ - ೯೨.೦೦%

**ಪಿ.ಯು.ಸಿ. : ಗ್ರಾಮೀಣ**

೧. ಕುಮಾರ್ ಬೊಳ್ಳುಮನೆ ಯು. ಯತೀಶ್
ಪದವಿ ಪೂರ್ವ ಕಾಲೇಜು, ಮೂರ್ನಾಡು - ೮೨.೮೩%

೨. ಕುಮಾರಿ ಬಾಳೆ ಹಿತ್ಲು ಕೆ. ಗೀತಾ
ಪದವಿ ಪೂರ್ವ ಕಾಲೇಜು ಮಾದಾಪುರ - ೮೨.೬೬%

೩. ಕುಮಾರಿ ಅಮೆಮನೆ ಎ. ಜಯಮಾಲಾ
ಕಾವೇರಿ ಪದವಿಪೂರ್ವ ಕಾಲೇಜು,
ಭಾಗಮಂಡಲ - ೭೨.೧೭%

**ಪಿ.ಯು.ಸಿ.: ನಗರ ಪ್ರದೇಶ**

೧. ಕುಮಾರ್ ದಂಬೆಕೋಡಿ ಎಸ್. ಆಯ್ಯಪ್ಪ
ಸ್ಟೈಂಟ್ ಆನ್ಸ್ ಪದವಿಪೂರ್ವ ಕಾಲೇಜು ವಿರಾಜಪೇಟೆ
೮೫.೦೦%

೨. ಕುಮಾರ ಮಲೆಬಾವು ಆರ್ ಚರಣರಾಜ್
ಸ್ಟೈಂಟ್ ಆನ್ಸ್ ಪದವಿಪೂರ್ವ ಕಾಲೇಜು ವಿರಾಜಪೇಟೆ
೮೫.೦೦%

೩. ಕುಮಾರಿ ಕುಯ್ಯಮುಡಿ ಸಿ. ಪೂಜಾ
ಎಂ.ಎಂ.ಕೆ. ಮತ್ತು ಎಸ್. ಡಿ. ಎಂ. ಪದವಿಪೂರ್ವ
ಕಾಲೇಜು, ಮೈಸೂರು - ೮೧.೬೬%

**ಪದವಿ ಶಿಕ್ಷಣ**

೧. ಕುಮಾರಿ ಕಾಳೇರಮ್ಮನ ಡಿ. ಕೃಪಾ
ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು,
ಉಜಿರೆ - ೮೬.೨೩%

೨. ಕುಮಾರಿ ಪೊನ್ನಚ್ಚನ ಕೋಮಲ
ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು,
ಉಜಿರೆ - ೮೬.೦೬%

೩. ಕುಮಾರಿ ಪರ್ಲಕೋಟಿ ಜಿ. ದೀಪ್ತಿ - ೬೬.೦೬

**ಭಾಷಣ ಸ್ಪರ್ಧೆ**

***(ಪ್ರೌಢ ಮಕ್ಕಳಿಗೆ)***

೧. ಕುಮಾರಿ ಮೇಡತನ ವಿ. ಮೋನಿಕಾ
ಸ್ಟೈಂಟ್ ಜೋಸೆಫ್ಸ್ ಮಡಿಕೇರಿ

೨. ಕುಮಾರಿ ಪೂಜಾರಿರ ಬಿ. ಪುಷ್ಪಾಂಜಲಿ
ಬ್ಲಾಸಮ್ಸ್ ಮಡಿಕೇರಿ

೩. ಕುಮಾರಿ ಯಾಲದಾಳು ಬಿ. ಬಿಂದು
ಸ್ಟೈಂಟ್ ಜೋಸೆಫ್ಸ್ ಮಡಿಕೇರಿ
ಮತ್ತು ಕುಮಾರಿ ಕುಡುಪಜೆ ಜೆ. ಚೈತ್ರಾ
ಪ್ರೌಢಶಾಲೆ ಭಾಗಮಂಡಲ.

**ಸಾಮಾನ್ಯಜ್ಞಾನ ಸ್ಪರ್ಧೆ**

೧. ಕುಮಾರ್ ಪೂಜಾರಿರ ಬಿ. ಚಂದ್ರಜಿತ್
ಜವಾಹರ್ ನವೋದಯ ಶಾಲೆ ಮಡಿಕೇರಿ.

೨. ಕುಮಾರ್ ಕುಯ್ಯಮುಡಿ ಸಿ. ಅರ್ಶಿತ್
ಸ್ಟೈಂಟ್ ಜೋಸೆಫ್ಸ್ ಮಡಿಕೇರಿ.

೩. ಕುಮಾರಿ ಕುದುಕುಳಿ ಬಿ ಹೆಲೆನ್
ಪ್ರೌಢ ಶಾಲೆ ಬೆಟ್ಟಗೇರಿ.

**ಪ್ರತಿಭಾ ಪುರಸ್ಕಾರ**

***(ಕ್ರೀಡೆ ಮತ್ತು ವಿಜ್ಞಾನ)***

೧. ಕುಮಾರಿ ಕೋಟೆಮನೆ ಬಿ. ಕವಿತಾ
(ರಾಷ್ಟ್ರ ಮಟ್ಟದ ಅಥ್ಲೆಟಿಕ್ಸ್)
ಮದೆ ಮಹೇಶ್ವರ ಪದವಿಪೂರ್ವ ಕಾಲೇಜು, ಮದೆನಾಡು.

# ಗ್ರಾಮ ದರ್ಶನ : ಮಹದೇವಪುರ



**ಲೇಖಕ : ಶಿವಳ್ಳಿ ಕೆಂಪೇಗೌಡ**

*ಸೂಕ್ಷ್ಮ ಪರಿಚಯ :*

ಶಿವಳ್ಳಿ ಕೆಂಪೆಗೌಡರು ಮಂಡ್ಯ ಜಿಲ್ಲೆಯ ಶಿವಳ್ಳಿಯವರು, ಶ್ರೀಯುತರು ಹಲವಾರು ಕಥೆ. ಕವನ, ಸಂಕಲನವನ್ನು ಬರೆದಿರುವ ಸಾಹಿತಿಗಳು. ಹಲವು ಸಮಾರಂಭಗಳಲ್ಲಿ ಸಾರಥ್ಯವಾಗಿಸಿದವರು. ಇತ್ತೀಚೆಗೆ ಗ್ರಾಮ ದರ್ಶನ ಶೀರ್ಷಿಕೆಯಡಿಯಲ್ಲಿ ಡ್ಯ ಜಿಲ್ಲೆಯ 18 ನೇ ಗ್ರಾಮ ದರ್ಶನ ಲೇಖನವಾಗಿ ಈ ಮಹದೇವಪುರ ಪರಿಚಿತವಾಗಿದೆ. ಕಳೆದ ವರ್ಷ ಮೈಸೂರು ದಸರಾ ಕವಿಗೋಷ್ಠಿಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದ ಹಿರಿಮೆ ಶ್ರೀಯುತರದು. ಮತ್ತು ಮಂಡ್ಯ ಜಿಲ್ಲಾ ಕನ್ನಡ ಸಾರಸ್ವತ ಲೋಕವು ಶ್ರೀ ಕೆಂಪೇಗೌಡರ ಲೇಖನಗಳಿಂದ ಪುನೀತವಾಗಿದೆ. ಶ್ರೀಯುತರಿಂದ ಉತ್ತಮ ವಿಚಾರಧಾರೆಯ ಕೃತಿಗಳು ಇನ್ನು ಮುಂದಕ್ಕೆ ಮೂಡಿ ಬರಲೆಂದು ಹಾರೈಸೋಣ. - ಸಂಪಾದಕಿ.

ಕನ್ನಡ ನಾಡಿ ನ ಜೀವನದಿ ಕಾವೇರಿ ಯ ಪಶ್ಚಿಮ ದಂಡೆ ಯ ಮೇಲಿರುವ ಮಹದೇವಪುರ ದಾಸವರೇಣ್ಯ ಕನಕ ದಾಸರ ಪಾದಧೂಳಿ ನಿಂದ ಪುನೀತವಾದ ಗ್ರಾಮ. ಕಳೆದ ಎರ ಡು ವರ್ಷಗಳಿಂದ ಇಲ್ಲಿ ನೂರಾರು ಚಿತ್ರಗಳ ಚಿತ್ರೀ ಕರಣ ನಡೆದು ಈ ಗ್ರಾಮ ಬೆಳ್ಳಿ ತೆರೆಯ ಮೇಲೆ ವಿಜೃಂಭಿಸಿದೆ. ಕರ್ನಾಟಕದ ಹಾಲಿವುಡ್ ಎಂದೇ ಪ್ರಖ್ಯಾತವಾಗಿದೆ.

ಶ್ರೀರಂಗಪಟ್ಟಣ ತಾಲ್ಲೂಕಿನ ಮಹದೇವಪುರಕ್ಕೆ ಪೂರ್ವದಲ್ಲಿ ಹೊಳೆ ಮಾಧವಪುರ ಎಂಬ ಹೆಸರಿತ್ತು. ಹೊಳೆ ಮಾಧವಪುರ ನಂತರ ಬಿಂದು ಮಾಧವಪುರವಾಯಿತು. ಕಳೆದ ಒಂದು ಶತಮಾನದಿಂದೀಚೆಗೆ ಮಹದೇವಪುರ ಎಂಬ ಹೆಸರು ಚಾಲ್ತಿಗೆ ಬಂದು ಸ್ಥಿರವಾಗಿ ಉಳಿದಿದೆ.

ಮಹದೇವಪುರದ ಮುಂಭಾಗದಲ್ಲಿ ಶ್ರೀಲಕ್ಷ್ಮೀ ನರಸಿಂಹಸ್ವಾಮಿ ದೇವಾಲಯವಿದೆ. ಇಲ್ಲಿ ಬಿಂದು ಮಾಧವಸ್ವಾಮಿಯ ಕಲಾತ್ಮಕ ವಿಗ್ರಹವಿದೆ. ಚತುರ್ಭುಜಗಳಿಂದ ಶೋಭಿಸುವ ಬಿಂದು ಮಾಧವ 'ಸ್ವಾಮಿಯ ಕಲಾತ್ಮಕ ವಿಗ್ರಹವಿದೆ. ಚತುರ್ಭುಜಗಳಿಂದ ಶೋಭಿಸುವ ಬಿಂದು ಮಾಧವಸ್ವಾಮಿಯ ಹಿಂಭಾಗದ ಬಲ ಹಸ್ತದಲ್ಲಿ ಚಿತ್ರವಿದ್ದರೆ, ಎಡ ಹಸ್ತದಲ್ಲಿ ಶಂಖವಿದೆ. ಮುಂದಿನ ಎಡಗೈಯಲ್ಲಿ ಗದೆಯಿದೆ, ಬಲಗೈಯ ಹೆಬ್ಬೆರಳು ಹಾಗೂ ತೋರು ಬೆರಳಿನ ನಡುವೆ ತಾವರೆ ಮೊಗ್ಗು ಇದೆ. ವಿಗ್ರಹದ ಮೇಲಿನ ಪ್ರಭಾವಳಿಯಲ್ಲಿ ದಶಾವತಾರದ ಕೆತ್ತನೆಗಳಿವೆ. ಬಿಂದು ಮಾಧವಸ್ವಾಮಿ ವಿಗ್ರಹ ಜೀವ ಕಳೆಯಿಂದ ಕೂಡಿದ್ದು, ಆಸ್ತಿಕರ ಕಂಗಳಲ್ಲಿ ಆನಂದ ಬಾಷ್ಪ ಉದುರುವಂತೆ ಮಾಡುತ್ತದೆ. ಈ ಸುಂದರ ಕಲಾ ಪೂರ್ಣ ವಿಗ್ರಹವನ್ನು ಕಡೆದ ಶಿಲ್ಪಿ ಡಂಕಣಾಚಾರಿ ಎಂಬ ಪ್ರತೀತಿಯಿದೆ.

ಬಿಂದು ಮಾಧವಸ್ವಾಮಿಯ ಎಡ ಪಾರ್ಶ್ವದಲ್ಲಿ ಲಕ್ಷ್ಮೀ ನರಸಿಂಹಸ್ವಾಮಿಯ ಸೌಮ್ಯ ರೂಪದ ವಿಗ್ರಹವಿದೆ. ಬಲ ಪಾರ್ಶ್ವದಲ್ಲಿ ಕಾಳಿಂಗ ಸರ್ಪದ ಎರಡೂ ಹೆಡೆಯ ನಡುವೆ ಮಂದಸ್ಮಿತ ಬೀರುತ್ತಾ ನಿಂತಿರುವ ಕೃಷ್ಣನ ಅಪರೂಪದ ಮೂರ್ತಿಯಿದೆ. ಅದರ ಬಲಭಾಗದಲ್ಲಿ ಮೂವರು ಆಳ್ವಾರರುಗಳು ಹಾಗೂ ಆಚಾರ್ಯ ರಾಮಾನುಜರ ವಿಗ್ರಹಗಳಿವೆ.

ಮಹದೇವಪುರದಲ್ಲಿ ಕಾಶಿ ವಿಶ್ವೇಶ್ವರ ಸ್ವಾಮಿ ದೇವಸ್ಥಾನವಿದೆ. ಇದನ್ನು ಕ್ರಿ.ಶ. 1348 ರಲ್ಲಿ ಭಕ್ಷಿ ಭೀಮ ರಾಯರು ಕಟ್ಟಿಸಿದ್ದಾರೆ. ಕಾಶಿಯಲ್ಲಿ ಈಶ್ವರ ಲಿಂಗವನ್ನು ಮಾಡಿಸಿ ಒಂಟೆಯ ಮೇಲೆ ಏರಿಸಿ ತಂದು ಅದನ್ನು ಇಲ್ಲಿ ಪ್ರತಿಷ್ಠಾಪಿಸಿದ್ದಾರೆ.

ಭಕ್ಷಿ ಭೀಮರಾಯರು ಈ ದೇವಸ್ಥಾನದ ವಿಶಾಲವಾದ ಬಯಲಿನ ಸುತ್ತಾ ಕೋಟೆಯೊಂದನ್ನು ಕಟ್ಟಿಸಿದ್ದರು. ಈ ಕೋಟೆಯ ಒಂದು ಪಾರ್ಶ್ವದಲ್ಲಿ ಚಿಕ್ಕ ಅರಮನೆಯನ್ನು ಕಟ್ಟಿಸಿ ಅಲ್ಲಿಯೇ ವಾಸಿಸುತ್ತಿದ್ದರು. ಅದರ ಪಕ್ಕದಲ್ಲಿ ಕುದುರೆ ಲಾಯವೂ ಸಹ ಇತ್ತು.

ಭಕ್ಷಿ ಭೀಮರಾಯರ ಅರಮನೆಯಲ್ಲಿ ನಾರಾಯಣಭಟ್ಟನೆಂಬ ಕರಣಿಕನಿದ್ದ. ಒಮ್ಮೆ ಮಹಾರಾಣಿಯ ವಜ್ರದುಂಗುರ ಕಾಣೆಯಾಯಿತು. ಅರಮನೆಯ ಊಳಿಗದವರಿಗೆ ನಾರಾಯಣಭಟ್ಟರ ಮೇಲೆ ಅನುಮಾನ ಬಂತು. ಭಕ್ಷಿ ಭೀಮರಾಯರು ಹಿಂದೆ ಮುಂದೆ ಆಲೋಚಿಸದೆ ನಾರಾಯಣಭಟ್ಟರನ್ನು ಆನೆಯಿಂದ ತುಳಿಸಿ ಸಾಯಿಸಿದರು. ಆನೆಯಿಂದ ತುಳಿಸಲು ನಾರಾಯಣಭಟ್ಟರನ್ನು ನೆಲದ ಮೇಲೆ ಮಲಗಿಸಿದ ಕಾಲದಲ್ಲಿ ಅವರು ಕಣ್ಣಲ್ಲಿ ನೀರು ತಂದುಕೊಂಡು 'ವೇದ ಘೋಷಗಳು ಮೊಳಗುವ ಜಾಗದಲ್ಲಿ ಗೂಬೆಯ ಕರ್ಕಶ ಧ್ವನಿ ಕೇಳಿ ಬರಲಿ' ಎಂದು ಶಾಪ ಕೊಟ್ಟರು.

ಒಂದೆರಡು ದಿನಗಳ ನಂತರ ಮಹಾರಾಣಿಯವರು ಉಪ್ಪಿನಕಾಯಿ ಜಾಡಿಯ ಮುಚ್ಚಳ ತೆರೆದಾಗ ಅದರಲ್ಲಿ ಉಂಗುರ ಸಿಕ್ಕಿತು. ಭಕ್ಷಿ ಭೀಮರಾಯರು ಪಶ್ಚಾತ್ತಾಪದ ದಳ್ಳುರಿಯಲ್ಲಿ ಬೆಂದರು. ಸರಪಳಿಯಿಂದ ಬಂಧಿತರಾಗಿ

ನೆಲದ ಮೇಲೆ ಅಸಹಾಯಕತೆಯಿಂದ ಮಲಗಿದ್ದ ನಾರಾಯಣಭಟ್ಟರು ಆನೆ ಪಾದವನ್ನು ಕಂಡು ಗೈದ ಆರ್ತನಾದ ಅವರ ಕರ್ಣವನ್ನು ಅಲಗಿನಂತೆ ಇರಿಯುತ್ತಿತ್ತು. ಅವರು ಕುಂತಲ್ಲಿ ಕೂರಲಾಗದೆ ನಿಂತಲ್ಲಿ ನಿಲ್ಲಲಾಗದೆ ಚಡಪಡಿಸತೊಡಗಿದರು.

ಆ ದಿನರಾತ್ರಿ ಅವರ ಕನಸಿನಲ್ಲಿ ಕಾಣಿಸಿ ಕೊಂಡ ನಾರಾಯಣಭಟ್ಟರು 'ಪ್ರತಿದಿನ ದೇವರಿಗೆ ನೈವೇದ್ಯ ನಡೆದ ಮೇಲೆ ಕೊನೆಯಲ್ಲಿ ನನ್ನ ವಿಗ್ರಹವನ್ನೂ ಪೂಜೆ ಮಾಡಲಿ" ಎಂದು ಹೇಳಿದಂತಾಯ್ತು.

ಬ್ರಾಹ್ಮಣ ಹತ್ಯಾದೋಶದಿಂದ ಪರಿತಪಿಸುತ್ತಿದ್ದ ಭಕ್ತಿ ಭೀಮರಾಯರು ನಾರಾಯಣಭಟ್ಟರ ವಿಗ್ರಹವೊಂದನ್ನು ಮಾಡಿಸಿ ಅದನ್ನು ಶಿವಲಿಂಗ ಮತ್ತು ಪಾರ್ವತಿ ಅಮ್ಮನವರ ವಿಗ್ರಹದ ಮೂಲೆಯಲ್ಲಿ ಪ್ರತಿಷ್ಠಾಪನೆ ಮಾಡಿಸಿದರು. ಅಂದಿನಿಂದ ಕಾಶಿ ವಿಶ್ವೇಶ್ವರಸ್ವಾಮಿ ಮತ್ತು ಪಾರ್ವತಿ ಅಮ್ಮನವರಿಗೆ ನೈವೇದ್ಯವಾದ ಮೇಲೆ ನಾರಾಯಣಭಟ್ಟರ ವಿಗ್ರಹವನ್ನೂ ಪೂಜಿಸುವ ಪದ್ಧತಿ ಅನೂಚಾನವಾಗಿ ನಡೆದುಕೊಂಡು ಬಂದಿದೆ.

ಕಾಶಿ ವಿಶ್ವೇಶ್ವರ ಸ್ವಾಮಿ ಗರ್ಭಗೃಹದ ಬಲಭಾಗದಲ್ಲಿ ಬೃಹತ್ ಗಣಪತಿ ವಿಗ್ರಹವಿದೆ. ಪಾರ್ವತಿ ಅಮ್ಮನವರ ವಿಗ್ರಹದ ವದನಾರವಿಂದದಲ್ಲಿ ಥಳ ಥಳ ಹೊಳೆಯುವ ಮುತ್ತಿನ ಮೂಗುತ್ತಿಯಿದೆ. ಇದನ್ನು ಶತಮಾನಗಳ ಹಿಂದೆಯೇ ಭಕ್ತನೋರ್ವ-ಕೊಲ್ಹಾಪುರದಿಂದ ತಂದು ಜಗನ್ಮಾತೆಗೆ ಕಾಣಿಕೆಯಾಗಿ ಅರ್ಪಿಸಿದನೆಂದು ಹಿರಿಯರು ಹೇಳುತ್ತಾರೆ.

ಈ ದೇವಾಲಯದ ದಕ್ಷಿಣ ಮಂಟಪದ ಕಂಬದಲ್ಲಿ ಲಕ್ಷ್ಮೀ ನರಸಿಂಹಸ್ವಾಮಿ ಮೂರ್ತಿಯಿದೆ. ಶಿಲ್ಪಿ ಈ ಮೂರ್ತಿಯನ್ನು ಕೆತ್ತಿದ್ದಲ್ಲ ಎಂಬ ಸಂಗತಿ ವಿಸ್ಮಯ ಗೊಳಿಸುತ್ತದೆ! ಐವತ್ತೈದು ವರ್ಷಗಳ ಹಿಂದೆ ಈ ಮೂರ್ತಿ ಇರುವ ಜಾಗದಲ್ಲಿ ಬರೀ ರೇಖೆಗಳಿದ್ದವು. ಕಾಲಕ್ರಮೇಣ ಈ ರೇಖೆಗಳು ವಿನ್ಯಾಸಗೊಳ್ಳುತ್ತಾ ಲಕ್ಷ್ಮೀ ನರಸಿಂಹ ಸ್ವಾಮಿಯ ಸ್ಫುಟವಾದ ಆಕಾರ ತಳೆದುವೆಂದು ಅರ್ಚಕ ಡಿ. ಎಸ್. ವೆಂಕಟೇಶಮೂರ್ತಿ ಹೇಳುತ್ತಾರೆ. ಈ ಕಂಬದಲ್ಲಿ ಲಕ್ಷ್ಮೀ ನರಸಿಂಹಸ್ವಾಮಿ ವರ್ಷದಿಂದ ವರ್ಷಕ್ಕೆ ಸ್ಫುಟವಾಗಿ ಕಾಣುತ್ತಾ ಹೋದ ವಿವಿಧ ಹಂತಗಳಲ್ಲಿ ಕಣ್ಣಾರೆ ಕಂಡು ಕೃತಾರ್ಥರಾದ ಹಿರಿಯರು ಕಣ್ಣಿಗೆ ಕಟ್ಟುವಂತೆ ವಿವರಿಸುತ್ತಾರೆ.

ಕಾಶಿ ವಿಶ್ವೇಶ್ವರ ಸ್ವಾಮಿ ರಥೋತ್ಸವವು ಬೆಂಗಳೂರು ಕರಗ ನಡೆಯುವ ಚೈತ್ರ ಪೂರ್ಣಿಮೆಯಂದೇ ಭಕ್ತಾದಿಗಳ ಹರ್ಷೋಲ್ಲಾಸದ ನಡುವೆ ನಡೆಯುತ್ತಿತ್ತು. ಆದರೆ ರಥ ಮುರಿದು ಹೋಗಿ ೩೦ ವರ್ಷಗಳಾಗಿವೆ. ೧೯೭೭ರಲ್ಲಿ ನಡೆದ ರಥೋತ್ಸವವೇ ಕೊನೆಯದಾಗಿದೆ. ಮುಜರಾಯಿ ಇಲಾಖೆಗೆ ಸೇರಿರುವ ಈ ದೇವಸ್ಥಾನದ ಬೃಹತ್ ಗೋಪುರ ೧೯೩೦ರಲ್ಲಿ ಭಿನ್ನವಾಗಿದೆ. ದೇವಸ್ಥಾನದ ತಳಿಗೆ ಮನೆ, ಯಜ್ಞಯಾಗ ಮಂದಿರ, ಕಾಂಪೌಂಡು ಎಲ್ಲವೂ ಶಿಥಿಲವಾಗಿವೆ. ಗ್ರಾಮದ ಗತ ವೈಭವವನ್ನು ಕಂಡು ಪುಳಕಿತರಾದವರಲ್ಲಿ ಅನೇಕ ಹಿರಿಯರು ಈಗ ಇದಕ್ಕೆ ಒದಗಿ ಬಂದಿರುವ ದುಸ್ಥಿತಿಯನ್ನು ಕಂಡು ಮರುಕ ಪಡುವಂತಾಗಿದೆ.

ದೇವಸ್ಥಾನದ ಈ ಸ್ಥಿತಿಯನ್ನು ಕಂಡ ಗ್ರಾಮಸ್ಥರು ಇದಕ್ಕೆ ಪುನಶ್ಚೇತನ ನೀಡಲು ಜೀರ್ಣೋದ್ಧಾರ ಸಮಿತಿಯೊಂದನ್ನು ರಚಿಸಿ ಕಾರ್ಯಮಗ್ನರಾಗಿದ್ದಾರೆ. ಈಗಾಗಲೇ ನೂತನ ರಥ ನಿರ್ಮಾಣ ಕಾರ್ಯ ಭರದಿಂದ ಸಾಗುತ್ತಿದೆ.

ಕಾವೇರಿ ತೀರದಲ್ಲಿ ಹೊಯ್ಸಳ ಕಾಲದ ಚೆನ್ನಕೇಶವ ಸ್ವಾಮಿ ದೇವಾಲಯವಿದೆ. ದಾಸವರೇಣ್ಯ ಕನಕದಾಸರು ತಿರುಪತಿ ಯಾತ್ರೆಗೆ ಹೋಗುವ ದಾರಿಯಲ್ಲಿ ಮಹದೇವ ಪುರಕ್ಕೆ ಆಗಮಿಸಿದ್ದರು. ನದೀ ತೀರದ ಸುಂದರ ಪರಿಸರದ ಲ್ಲಿರುವ ಚೆನ್ನಕೇಶವಸ್ವಾಮಿ ದರ್ಶನ ಮಾಡಿ ಆನಂದ ಭರಿತರಾದರು. ಆ ಕಾಲದಲ್ಲಿ ಈಗಿನಂತೆ ಸೇತುವೆ ಇರಲಿಲ್ಲ. ನದಿಯನ್ನು ದಾಟಲು ದೋಣಿಯನ್ನೇ ಆಶ್ರಯಿಸಬೇಕಾಗಿತ್ತು.

ಕನಕದಾಸರು ತಮ್ಮ ಹುಟ್ಟೂರಾದ ಬಾಡ (ಧಾರವಾಡ ಜಿಲ್ಲೆ) ಗ್ರಾಮದಿಂದ ಕಾಲ್ನಡಿಗೆಯಲ್ಲೇ ಬಂದಿದ್ದರು. ಅಲ್ಲಿಂದ ಇಲ್ಲಿಯವರೆಗೆ ನಡೆದು ನಡೆದೂ ಅಂಗಾಲಿನಲ್ಲಿ ಹೊಪ್ಪಳೆಗಳೆದಿದ್ದವು. ಮೈ ಮೇಲೆ ಕುರಗಳೆದಿದ್ದವು. ಅಂಬಿಗನಿಗೆ ಏನು ಮಂಕು ಕವಿದಿತ್ತೋ ಏನೋ! ಕನಕದಾಸರು ಅವನ ಕಣ್ಣಿಗೆ ವಿಕಾರವಾಗಿ ಕಂಡರು. ಆತ ಕನಕದಾಸರನ್ನು ದೋಣಿಗೆ ಹತ್ತಿಸಿಕೊಳ್ಳಲಿಲ್ಲ. ದೋಣಿಯಲ್ಲಿದ್ದ ಇತರೆ ಪಯಣಿಗರು ಅವರನ್ನು ಹತ್ತಿಸಿಕೊಳ್ಳುವಂತೆ ಒತ್ತಾಯಿಸಿದರೂ ಅಂಬಿಗ ಅವರ ಮಾತಿಗೆ ಸೊಪ್ಪು ಹಾಕಲಿಲ್ಲ! ದೋಣಿ ಸಾಗಿತು.

ತಕ್ಷಣ ಕನಕದಾಸರು ಪಕ್ಕದ ತೋಟದ ಮಾಲೀಕನಿಂದ ಬಾಳೆಲೆಯನ್ನು ಕೇಳಿ ಈಸಿಕೊಂಡು, ಹೊಳೆಯ ಮೇಲೆ ಹಾಸಿ ಅದರ ಮೇಲೆ ಕುಂತು ದೋಣಿಯನ್ನು ಹಿಂದೆ ಹಾಕಿ ಮುಂದೆ ಸಾಗಿದರು. ಈ ಪವಾಡವನ್ನು ಕಂಡು ಅಚ್ಚರಿಗೊಂಡ ಪ್ರಯಾಣಿಕರಿಗೆ ಇವರು ಮನುಷ್ಯ ಮಾತ್ರದವರಲ್ಲ, ನರ ಮನ್ನನ ರೂಪದಲ್ಲಿರೋ ದೇವ ಮಾನ್ಯರು ಎನಿಸಿತು.

ಆನೆಕಲ್ಲು ನೇರದ ದೋಣಿ ಕಡದಲ್ಲಿ ಹೊಳೆ ಮಧ್ಯೆ ಇರುವ ಕಲ್ಲಿನ ಮೇಲೆ ಕನಕದಾಸರು ನಿಂತರು. ಇದೇ ಕನಕನ ಕಲ್ಲು ! ಕನಕದಾಸರು ನಿಂತ ಕಲ್ಲಿನ ಮೇಲೆ ಅವರು ಪಾದವೂರಿರುವ ಗುರುತನ್ನು ಹೊಳೆಯಲ್ಲಿ ನೀರು ಕಡಿಮೆಯಾದಾಗ ಹೋಗಿ ನೋಡಬಹುದು. ಕಾಶಿ ವಿಶ್ವೇಶ್ವರ ಸ್ವಾಮಿ ರಥೋತ್ಸವದ ಸಂದರ್ಭದಲ್ಲಿ ಸಂಜೆಯ ವೇಳೆ ತೆಪ್ಪೋತ್ಸವ ನಡೆಯುತ್ತದೆ. ದೋಣಿಯಲ್ಲಿ ಮಂಗಳ ವಾದ್ಯ ಮೊಳಗುತ್ತಿರುತ್ತದೆ. ಆಗ ಉತ್ಸವ ಮೂರ್ತಿಗಳನ್ನು ಕನಕನ ಕಲ್ಲಿನ ಮೇಲಿಟ್ಟು ಪೂಜಿಸುವ ಪದ್ಧತಿ ಈಗಲೂ ರೂಢಿಯಲ್ಲಿದೆ.

ದೋಣಿ ಇನ್ನೂ ಅಷ್ಟು ದೂರದಲ್ಲಿ ಬರುತ್ತಿರು ವಾಗಲೇ ಕನಕದಾಸರು ಮತ್ತೆ ಹೊಳೆಯ ಮೇಲೆ ಬಾಳೆಲೆ ಹಾಸಿ ಅದರ ಮೇಲೆ ಕುಳಿತು ಆಚೆ ದಡ ತಲುಪಿದರು ದೋಣಿ ದಡ ತಲುಪಿದ ಕೂಡಲೇ ಅಂಬಿಗ ಕಣ್ಣೀರು ಬಟ್ಟಾಡಿಸುತ್ತಾ ಅವರ ಪಾದಗಳ ಮೇಲೆ ಬಿದ್ದು ತನ್ನ ತಪ್ಪಿಗಾಗಿ ಕ್ಷಮೆ ಯಾಚಿಸಿದ ಪ್ರಯಾಣಿಕರು ಕನಕದಾಸರ ದರ್ಶನದಿಂದ ಧನ್ಯರಾದರು.

ಆಗ ಕನಕದಾಸರು 'ಯಾವ ಕಾರಣಕ್ಕೂ ಕಾವೇರಿ ನದಿಯಲ್ಲಿ ದೋಣಿ ದುರಂತವಾಗದಿರಲಿ, ಪ್ರಯಾಣಿಕರು ಸುರಕ್ಷಿತವಾಗಿ ದಡ ತಲುಪಲಿ' ಎಂದು ವರ ನೀಡಿದರು.

---

ಎಲ್ಲಿ ಆಶೆ, ಅಲ್ಲಿ ಅಂಜಿಕೆ

---

ಅಂದಿನಿಂದ ಇಂದಿನವರೆಗೂ ಯಾವುದೇ ದೋಣಿ ದುರಂತವಾಗಿಲ್ಲ.

ಅಂದಿನಿಂದ ಮಹದೇವಪುರದ ಗಂಗಾ ಮತಸ್ಥರು ವರ್ಷಕ್ಕೊಮ್ಮೆ ಕನಕದಾಸರ ಹಬ್ಬವನ್ನು ಆಚರಿಸುತ್ತಾರೆ. ನದಿಯ ದೋಣಿಕಡದ ದಂಡೆಯ ಮೇಲೆ ಕನಕದಾಸರ ದೇವಾಲಯ ನಿರ್ಮಾಣವಾಗುತ್ತಿದೆ. ದೋಣಿ ಕಡದ ಪಕ್ಕದಲ್ಲಿಯೇ ಕಾವೇರಿ ನದಿಗೆ ಅಡ್ಡಲಾಗಿ ಸೇತುವೆಯೊಂದನ್ನು ಕಟ್ಟಲಾಗಿದೆ. ಕರ್ನಾಟಕದ ಅತೀ ಉದ್ದನೆಯ ಸೇತುವೆಗಳಲ್ಲಿ ಇದೂ ಒಂದು. 3-12-1986 ರಂದು ಕರ್ನಾಟಕ ರಾಜ್ಯದ ಆಗಿನ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ಅವರು ಈ ಸೇತುವೆಯ ಉದ್ಘಾಟನೆಯನ್ನು ನೆರವೇರಿಸಿದ್ದಾರೆ. ಆಗಿನ ಲೋಕೋಪಯೋಗಿ ಮತ್ತು ನೀರಾವರಿ ಸಚಿವರು ಹಾಗೂ ಮಾಜಿ ಪ್ರಧಾನಿ ಹೆಚ್.ಡಿ. ದೇವೆಗೌಡರು ಉದ್ಘಾಟನಾ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಈ ಸೇತುವೆಯ ಮೇಲೆ ಹಾದೂ ಹೋಗುವ ವಾಹನಗಳಿಗೆ ಶುಲ್ಕ ನಿಗದಿ ಪಡಿಸಲಾಗಿದೆ.

ಮಹದೇವಪುರದ ಬಳಿ ಉತ್ತರದಿಂದ ದಕ್ಷಿಣಾಭಿಮುಖವಾಗಿ ಹರಿಯುವ ಕಾವೇರಿ ನದಿಯ ಪಾತ್ರ ಅತ್ಯಂತ ವಿಶಾಲವಾಗಿದ್ದು, ಬೆಟ್ಟ ಗುಡ್ಡಗಳ ಹಿನ್ನಲೆಯಲ್ಲಿ ನಿಸರ್ಗ ಸೌಂದರ್ಯವೇ ಮೈ ತಳೆದಂತಿದೆ. ಸೇತುವೆಯ ಮೇಲ್ಭಾಗದಲ್ಲಿ ಜುಳು ಜುಳು ನಿನಾದ ಮಾಡುವ ಕಾವೇರಿ ಕೆಳಭಾಗದಲ್ಲಿ ಮಂದಗಮನೆಯಾಗಿ ಸಾಗುವ ದೃಷ್ಯ ನಯನ ಮನೋಹರವಾಗಿದೆ. ನದಿಯ ಮಧ್ಯದಲ್ಲಿ ಅಲ್ಲಲ್ಲಿ, ಕೋಡುಗಲ್ಲುಗಳ ಮೇಲೆ ಕುಂತ ಬೆಳ್ಳಕ್ಕಿಗಳು ಸೃಷ್ಟಿಯ ಸೊಬಗಿಗೆ ಮಾರು ಹೋದಂತೆ ಕಾಣುತ್ತವೆ. ನೋವು ದುಗುಡವನ್ನು ಕ್ಷಣ ಕಾಲ ಮರೆಸಿ ಪ್ರಫುಲ್ಲವದನರನ್ನಾಗಿ ಮಾಡುವ ರಮ್ಯ ತಾಣವಿದು.

ಮಹದೇವಪುರದ ಮುಂಭಾಗದಲ್ಲಿ ನದಿ ಪರಿಸರಕ್ಕೆ ಹೊಂದಿಕೊಂಡಂತೆ ಬಂಗಲೆಯೊಂದಿದೆ. ಹಿಂದೆ ಇದನ್ನು ಅರಸು ಬಂಗಲೆ ಎಂದು ಕರೆಯುತ್ತಿದ್ದರು. ಪೂರ್ವದಲ್ಲಿ ಮಹದೇವಪುರ ಇನಾಂತಿ ಗ್ರಾಮವಾಗಿತ್ತು. ಹತ್ತನೆಯ ಚಾಮರಾಜ ಒಡೆಯರ್ (ಕ್ರಿ. ಶ. 1881-1894) ಅವರು ತಮ್ಮ ಭಾವ ಮೈದುನ ಲಕ್ಷ್ಮೀಕಾಂತರಾಜೇ ಅರಸ್‌ರವರಿಗೆ ಗ್ರಾಮವನ್ನು ಇನಾಂ ಆಗಿ ನೀಡಿದ್ದರು. ಲಕ್ಷ್ಮೀಕಾಂತರಾಜೇ ಅರಸ್‌ರವರು ಇಲ್ಲಿಗೆ ಬಂದಾಗ ಇಳಿದುಕೊಳ್ಳಲು 1885 ರಲ್ಲಿ ಈ ಭವ್ಯ ಬಂಗಲೆಯನ್ನು ಕಟ್ಟಿಸಿದರು.

ಲಕ್ಷ್ಮೀಕಾಂತರಾಜೇ ಅರಸುರವರು ಕಾಲವಾದ ಮೇಲೆ ಈ ಗ್ರಾಮ ಅವರ ದತ್ತುಪುತ್ರ ಎಂ. ಎಲ್. ರಾಜೇ ಅರಸ್‌ರರಿಗೆ ಸೇರಿತು. ದೇಶಕ್ಕೆ ಸ್ವಾತಂತ್ರ್ಯ ಬಂದು ಪ್ರಜಾ ಸರ್ಕಾರ ಸ್ಥಾಪನೆಯಾಗಿ 1958ರಲ್ಲಿ ಇನಾಂ ಪದ್ಧತಿ ರದ್ದಾಗುವವರೆಗೂ ಗ್ರಾಮಸ್ಥರು ಅವರಿಗೇ ಕಂದಾಯ ಕಟ್ಟುತ್ತಿದ್ದರು. ಕಂದಾಯ ವಸೂಲಿಗಾಗಿ ಒಬ್ಬ ಪಟೇಲನನ್ನು ನೇಮಕ ಮಾಡಲಾಗಿತ್ತು.

ಅರಸು ಬಂಗಲೆಯನ್ನು 1956 ರಲ್ಲಿ ನಿವೃತ್ತ ಗಡಿ ರಸ್ತೆ ಸಿವಿಲ್ ಇಂಜಿನಿಯರ್ ಕ್ಯಾಪ್ಟನ್ ಟಿ. ತಿಮ್ಮಯ್ಯನವರ ತಂದೆ ತಿಮ್ಮೇಗೌಡರು ಖರೀದಿಸಿದರು. ಈಗ ಜನ ಅರಸು ಬಂಗಲೆಯನ್ನು ತಿಮ್ಮೇಗೌಡರ ಬಂಗಲೆ ಎಂದು ಕರೆಯುತ್ತಾರೆ.

ವಿರಿಜಾ ನಾಲೆ ಮಹದೇವಪುರ ಸುತ್ತಮುತ್ತಲ ಪ್ರದೇಶವನ್ನು ಹಚ್ಚ ಹಸಿರಿನಿಂದ ಕಂಗೊಳಿಸುವಂತೆ ಮಾಡಿದೆ. ಈ ಗ್ರಾಮವು ಮುಂದೆ ನಿರ್ಮಾಣವಾಗಲಿರುವ ಕಾರಿಡಾರ್ ಹೆದ್ದಾರಿಗೆ ಸೇರಿದ್ದು, ಇಲ್ಲಿ ಉಪನಗರವೊಂದು ತಲೆ ಯೆತ್ತಲಿದೆ.

ಮೈಸೂರಿನಿಂದ ೧೬ ಕಿ. ಮೀ. ದೂರದಲ್ಲಿರುವ ಮಹದೇವಪುರ ಕನ್ನಡ ಚಿತ್ರಗಳ ಮಟ್ಟಿಗೆ ಚಿತ್ರ ಗ್ರಾಮವೇ ಆಗಿ ಬಿಟ್ಟಿದೆ. ಇಲ್ಲಿ ವರ್ಷದುದ್ದಕ್ಕೂ ಯಾವುದಾದರೊಂದು ಸಿನಿಮಾ ಶೂಟಿಂಗ್ ನಡೆಯುತಲೇ ಇರುತ್ತದೆ. ರೆಡಿ-ಲೈಟ್ಸ್, ಕ್ಯಾಮೆರಾ-ಆ್ಯಕ್ಷನ್ ಎಂಬ ನಿರ್ದೇಶಕರ ಸೂಚನೆ ಕೇಳಿ ಬರುತ್ತದೆ. ಕಲಾವಿದರು ಮತ್ತು ಕ್ಯಾಮರಾ ನಡುವೆ ಹಿಡಿದ ಕ್ಲ್ಯಾಪ್‌ಘಾಟ್ ಎಂದು ಸದ್ದು ಮಾಡುತ್ತಾ ಕ್ಷಣಾರ್ಧದಲ್ಲಿ ಪಕ್ಕಕ್ಕೆ ಸರಿಯುತ್ತದೆ. ಚಿತ್ರೀಕರಣ ಸಾಗುತ್ತದೆ. ಹೀರೋ-ಹೀರೋಯಿನ್‌ಗಳ ಮೇಲೆ ಯುಗಳ ಗೀತೆ ಚಿತ್ರೀಕರಿಸುವ ಕಾಲದಲ್ಲಿ ಇಡೀ ವಾತಾವರಣ ಮಾಯಾಲೋಕದಂತೆ ಭಾಸವಾಗುತ್ತದೆ.

ತಮ್ಮ ಮೊದಲ ಯತ್ನ 'ಪ್ರಣಯದ ಪಕ್ಷಿಗಳು' ಚಿತ್ರದಿಂದ 'ಕರ್ಪೂರದ ಗೊಂಬೆ'ಯವರೆಗೆ ಹಲವು ಬಾರಿ ಚಿತ್ರೀಕರಣಕ್ಕಾಗಿ ಮಹದೇವಪುರವನ್ನು ಬಳಸಿಕೊಂಡಿರುವ ನಿರ್ದೇಶಕ ಎಸ್. ಮಹೇಂದರ್ ಈ ಊರಿನ ಹೊಳೆ, ಹಸಿರು, ದೇವಸ್ಥಾನ, ಗ್ರಾಮೀಣ ಪರಿಸರ ಎಲ್ಲವೂ ಸಿನಿಮಾಕ್ಕಾಗಿಯೇ ಹಾಕಿರುವ ಸೆಟ್‌ನಂತೆ ಇದೆ. ಜತೆಗೆ ನೈಸರ್ಗಿಕ ಅನುಕೂಲತೆಗಳೂ ಇವೆ. ಮೈಸೂರು ತೀರಾ ಹತ್ತಿರ ಇರುವುದರಿಂದ ಕಲಾವಿದರು ಮತ್ತು ಚಿತ್ರ ತಂಡಕ್ಕೆ ವಸತಿ ಸಮಸ್ಯೆ ಇಲ್ಲ. ಬೆಂಗಳೂರಿನ ಯಾವುದೇ ಬಡಾವಣೆಯಿಂದ ಕಂಠೀರವ ಸ್ಟುಡಿಯೋ ತಲುಪುವುದಕ್ಕಿಂತ ಹೆಚ್ಚು ಬೇಗ ಮೈಸೂರಿನಿಂದ ಮಹದೇವಪುರ ತಲುಪಬಹುದು ಎಂದು ಈ ಊರಿನ ಅನುಕೂಲಗಳನ್ನು ನೆನೆದುಕೊಂಡಿದ್ದಾರೆ..

ಖ್ಯಾತ ಚಲನಚಿತ್ರ ನಿರ್ದೇಶಕ ಎಸ್. ನಾರಾಯಣ್ 'ಹಳ್ಳಿಯ ಪರಿಸರದಲ್ಲಿ ಒಮ್ಮೊಮ್ಮೆ ನಮಗೆ ಶ್ರೀಮಂತ ವಾತಾವರಣ ಬೇಕಾಗುತ್ತದೆ. ಊರಿನ ದೊಡ್ಡ ಗೌಡರ ಮನೆ, ನೂರಾರು ಆಳು ಕಾಳುಗಳು, ಹಳೇ ಕಾಲದ ವೈಭವಗಳು' ಈ ಹಳ್ಳಿಯಲ್ಲಿ ನಮಗೆ ಸಿಕ್ಕುತ್ತವೆ. ತೀರಾ ಬಡತನದ ಬದುಕೂ ಇಲ್ಲಿದೆ. ನದಿ ಮತ್ತು ನಾಲೆ ಇರುವುದರಿಂದ ಕೃತಕ ಜಲಪಾತಗಳನ್ನು ಕೂಡ ನಿರ್ಮಿಸಿಕೊಳ್ಳಬಹುದು. ಕಾವೇರಿ ನದಿಯ ಇನ್ನೊಂದು ಮಗ್ಗುಲಲ್ಲಿ ಅರಣ್ಯ ಇಲಾಖೆಗೆ ಸೇರಿದ ವಿಶಾಲ ಜಾಗವಿದೆ. ಕಾಡು, ಉದ್ಯಾನವನ ಹೇಗೆ ಬೇಕೋ ಹಾಗೆ ಅದನ್ನು ಬಳಸಿಕೊಳ್ಳಬಹುದು. ಇವೆಲ್ಲ ಅನುಕೂಲಗಳೂ ಒಂದೇ ಕಡೆ ಸಿಗೋದು ಅಪರೂಪ ಎಂದು ಮೆಚ್ಚುಗೆ ವ್ಯಕ್ತ ಪಡಿಸಿದ್ದಾರೆ.

ವರನಟ ಡಾ|| ರಾಜ್‌ಕುಮಾರ್ ಅವರ ಕ್ಯಾಂಪಿನ ಪ್ರೊಡಕ್ಷನ್ ಮ್ಯಾನೇಜರ್ ಚಿನ್ನಪ್ಪನವರ ಪ್ರಕಾರ ಮಹದೇವಪುರದ ಶೂಟಿಂಗ್‌ನಲ್ಲಿ ಕಂಡು ಬಂದ ಬಲು ದೊಡ್ಡ ಅನುಕೂಲವೆಂದರೆ ಅಲ್ಲಿ ಅನಿರ್ಬಾದಿತರಾಗಿ ಕೆಲಸ ಮಾಡಬಹುದು.

ಇದನ್ನು ಅವರ ಮಾತಲ್ಲೇ ಕೇಳೋಣ. 'ಬೇರೆ ಊರುಗಳಲ್ಲಾದರೆ ಸಿನಿಮಾ ಸ್ಟಾರ್‌ಗಳನ್ನು ಕಾಣಲು ವಿಪರೀತ ನೂಕು ನುಗ್ಗಲು ಉಂಟಾಗಿ ಎಷ್ಟೋ ಬಾರಿ

ಚಿತ್ರೀಕರಣವನ್ನೇ ಬಂದ್ ಮಾಡಬೇಕಾದ ಸ್ಥಿತಿ ಬರುತ್ತದೆ. ಆದರೆ ಈ ಊರಿನ ಜನರಿಗೆ ಇದೆಲ್ಲಾ ಮಾಮೂಲಾಗಿ ಬಿಟ್ಟಿದೆ. ಕೊಕ್ಕರೆ ಬೆಳ್ಳೂರಿನ ಜನಕ್ಕೆ ಹೆಜ್ಜಾರ್ಲೆಗಳು ಮಾಮೂಲಾದ ಹಾಗೆ, ಜನ ತಮ್ಮ ಪಾಡಿಗೆ ತಾವು ತಮ್ಮ ಕೆಲಸಕ್ಕೆ ಹೋಗಿ ಬಿಡ್ತಾರೆ. ಆಗಾಗ ಬೇರೆ ಊರಿನವರು ತಮ್ಮ ಪ್ರೀತಿಯ ಸ್ಟಾರ್‌ಗಳ ದರ್ಶನಕ್ಕೆ ಬರುವುದನ್ನು ಬಿಟ್ಟರೆ ಸ್ಥಳೀಯರ ನೂಕು ನುಗ್ಗಲು ಇರುವುದಿಲ್ಲ'

1983ರಲ್ಲಿ ಕೆ. ವಿ. ಜಯರಾಂ ನಿರ್ದೇಶನದ 'ಬೆತ್ತಲೆ ಸೇವೆ' ಈ ಊರಿನಲ್ಲಿ ಚಿತ್ರೀಕರಣವಾದ ಪ್ರಥಮ ಚಿತ್ರ. ಗ್ರಾಮೀಣ ಪರಿಸರದ ಕಥೆಯನ್ನೊಳಗೊಂಡಿದ್ದ ಈ ಚಿತ್ರದ ಶೂಟಿಂಗ್‌ಗೆ ಮೈಸೂರಿನ ಮಗ್ಗುಲಲ್ಲೇ ಇರುವ ಮಹದೇವಪುರ ಸೂಕ್ತವಾದ ಸ್ಥಳವೆಂದು ಹೆಸರಾಂತ ಛಾಯಾಗ್ರಾಹಕ ಬಿ. ಸಿ. ಗೌರಿಶಂಕರ್ ಸೂಚಿಸಿದರು. ಬೆಳ್ಳಿ ತೆರೆಯ ಮೇಲೆ ಮಹದೇವಪುರ ಮಿಂಚುವಂತೆ ಮಾಡಿದ ಕೀರ್ತಿ ಗೌರಿಶಂಕರ್ ಅವರಿಗೆ ಸಲ್ಲುತ್ತದೆ.

'ಬೆತ್ತಲೆ ಸೇವೆ' ಯಿಂದ ಮೊದಲ್ಗೊಂಡು ಇಲ್ಲಿಯವರೆಗೆ ಮಹದೇವಪುರದಲ್ಲಿ ಇನ್ನೂರಕ್ಕೂ ಹೆಚ್ಚು ಚಿತ್ರಗಳ ಚಿತ್ರೀಕರಣ ನಡೆದಿದೆ. ಇಲ್ಲಿ ಕನ್ನಡ ಚಿತ್ರಗಳಷ್ಟೇ ಅಲ್ಲದೆ ಸ್ಟೈಲ್ ಕಿಂಗ್ ರಜನಿಕಾಂತ್ ಅವರ ಅಭಿನಯದ 'ರಾಜಾಧಿರಾಜ' ಚಿತ್ರವೂ ಸೇರಿದಂತೆ ಮೂವ್ವತ್ತು ತಮಿಳು ಚಿತ್ರಗಳು ಎರಡು ಮಲೆಯಾಳಂ ಚಿತ್ರಗಳು ಚಿತ್ರೀಕರಿಸಲ್ಪಟ್ಟಿವೆ. ಇದಲ್ಲದೆ ಕಬೀರ್ ಬೇಡಿಯವರ 'ವಂಡರ್ಸ್ ಆಫ್‌ದಿ ಡಾರ್ಕ್ ಜಂಗಲ್' ಎಂಬ ಇಂಗ್ಲೀಷ್ ಚಿತ್ರದ ಶೂಟಿಂಗ್ ಸಹ ಇಲ್ಲಿಯೇ ನಡೆದಿದ್ದು, ಮಹದೇವಪುರ ದೇಶ-ವಿದೇಶಗಳ ರಜತ ಪರದೆಯ ಮೇಲೆ ರಾರಾಜಿಸಿದೆ. ಇಲ್ಲಿ ಲೆಕ್ಕಿಲ್ಲದಷ್ಟು ಟಿ. ವಿ. ಧಾರವಾಹಿಗಳ ಚಿತ್ರೀಕರಣ ನಡೆದಿದೆ. ಈಗಲೂ ನಡೆಯುತ್ತಿದೆ. ಈ ಗ್ರಾಮದ ಬಸವೇಗೌಡರ ತೊಟ್ಟಿ ಮನೆಯಲ್ಲಿ ಹತ್ತಾರು ಕನ್ನಡ ಚಿತ್ರಗಳ ಚಿತ್ರೀಕರಣ ಆಗಿದೆ.

ಈ ಗ್ರಾಮದಲ್ಲಿ ಯಾವುದೇ ಚಿತ್ರದ ಶೂಟಿಂಗ್‌ಗೆ ಮನೆ, ಗದ್ದೆ, ತೋಟ, ಬೀದಿಗಳನ್ನು ನಿಗದಿ ಮಾಡಲು ಹಾಗೂ ಚಿತ್ರೀಕರಣಕ್ಕೆ ಅಗತ್ಯವಾದ ನೇಗಿಲು, ಹಾರೆ, ಗುದ್ದಲಿ, ಪಿಕಾಸಿ, ಎತ್ತು, ಗಾಡಿ ಇತ್ಯಾದಿ ಪರಿಕರಗಳನ್ನು ಹೊಂದಿಸಿಕೊಡಲು ಏಜೆಂಟರಿದ್ದಾರೆ. ಅಂದಾನಿಗೌಡ ಅಂಥ ಒಬ್ಬ ಏಜೆಂಟ್, ಗಿರೀಗೌಡ ಅವನ ಪಾರ್ಟನರ್, ಈ ಇಬ್ಬರನ್ನೂ ಜನ 'ಪಿಚ್ಚರ್ ಗೌಡ್ರು' ಎಂದೇ ಕರೆಯುತ್ತಾರೆ. ಯಾವುದೇ ಸಿನಿಮಾ ತಂಡವಿರಲಿ ಊರಿಗೆ ಬಂದ ಸಮಾಚಾರ ತಿಳಿಯುತ್ತಿದ್ದಂತೆ ಈ 'ಪಿಚ್ಚರ್‌ಗೌಡ್ರು' ಅಲ್ಲಿಗೆ ಹಾಜರಾಗುತ್ತಾರೆ. ಅವರಿಗೆ ಎಂಥೆಂಥ ಮನೆ ಬೇಕು, ಯಾವ್ಯಾವ ಬೀದಿ ಬೇಕು ಕೊಟ್ಟಿಗೆ ದನಕರು, ಆಳು ಕಾಳು ಇವೆಲ್ಲ ವಿವರ ಪಡೆದು ಅವನ್ನೆಲ್ಲ ಹೊಂದಿಸಿಕೊಡುವ ಭರವಸೆ ನೀಡುತ್ತಾರೆ. ಜತೆಗೆ ಶೂಟಿಂಗ್ ಶುರುವಾದಾಗಿನಿಂದ ಮುಗಿಯುವವರೆಗೆ ಆ ತಂಡಕ್ಕೆ ಯಾವುದೇ ತೊಡ ಕುಂಟಾಗದಂತೆ ರಕ್ಷಣೆಯನ್ನು ಇವರೇ ನೀಡುತ್ತಾರೆ.

ರಾಜ್ಯ ಸರ್ಕಾರ ತನ್ನ ಒಡೆತನದ ನಾಲೆ, ಸೇತುವೆ, ರಸ್ತೆ, ಕಾಡುಗಳಲ್ಲಿ ಸಿನಿಮಾ ಶೂಟಿಂಗ್‌ಗೆ ದಿನಕ್ಕೆ ಇನ್ನೂರು ರೂಪಾಯಿ ಶುಲ್ಕ ನಿಗದಿ ಮಾಡಿದೆ. ಅದೇ ರೀತಿ ಮಹದೇವಪುರದ ಗ್ರಾಮ ಪಂಚಾಯತಿಯೂ ಊರಿಗೆ ಬರುವ ಸಿನಿಮಾ ತಂಡಕ್ಕೆ ಒಟ್ಟಾರೆಯಾಗಿ ಐನೂರೋ, ಸಾವಿರವೋ ಶುಲ್ಕ ವಸೂಲು ಮಾಡುತ್ತದೆ.

ಮಹದೇವಪುರದಲ್ಲಿ ಖಾಯಂ ಆಗಿ ನಡೆಯುವ ಸಿನಿಮಾ ಶೂಟಿಂಗ್ ಈ ಊರಿನ ನಾಲ್ಕೈದು ನಿರುದ್ಯೋಗಿ ಯುವಕರಿಗೆ ಸ್ವಯಂ ಉದ್ಯೋಗಕ್ಕೆ ಅವಕಾಶ ಮಾಡಿಕೊಟ್ಟಿದೆ. ಇಲ್ಲಿ ನಡೆಯುವ ಸಿನಿಮಾ ಶೂಟಿಂಗ್ ನೋಡಲೆಂದು ಬರುವ ಅಕ್ಕ ಪಕ್ಕದ ಹಾಗೂ ದೂರದ ಊರುಗಳ ಹುಡುಗರಿಗೆ ತಮ್ಮ ನೆಚ್ಚಿನ ಹೀರೋಗಳ ಜೊತೆ ನಿಂತು ಫೋಟೋ ತೆಗೆಸಿಕೊಳ್ಳುವುದು ಒಂದು ಶೋಕಿ. ಅಭಿಮಾನಿಗಳ ಈ ಆಸೆ ಪೂರೈಸಲೆಂದೇ ಇಲ್ಲಿನ ನಾಲ್ಕೈದು ಮಂದಿ ಯುವಕರು ಫೋಟೋ ಸ್ಟುಡಿಯೋಗಳನ್ನು ಆರಂಭಿಸಿದ್ದಾರೆ. ಈ ಸ್ಟುಡಿಯೋಗಳಿಗೆ ಅವರವರ ಮೆಚ್ಚಿನ ಹೆಸರುಗಳನ್ನೇ ಇಟ್ಟುಕೊಂಡಿದ್ದಾರೆ. ಇವುಗಳಲ್ಲಿ ಶಿವರಾಜ್‌ಕುಮಾರ್ ಸ್ಟುಡಿಯೋ, ರವಿಚಂದ್ರನ್ ಸ್ಟುಡಿಯೋ, ಮಾಲಾಶ್ರೀ ಫೋಟೋ ಫ್ಲ್ಯಾಶ್ ಜಯಪ್ಪನವರ ವರ್ಷ ಫ್ಲಾಶ್ ಸೆಂಟರ್ ಮುಖ್ಯವಾದವುಗಳು.

ಹಿಂದೆ ಸಿನಿಮಾ ಶೂಟಿಂಗ್‌ಗೆಂದು ರಜನಿಕಾಂತ್, ವಿಜಯಕಾಂತ್, ವಿಜಯಶಾಂತಿ ಹಾಗೂ ಹಿಂದಿ ಚಿತ್ರ ನಟ ಸನ್ನಿಡಿಯೋಲ್ ಬಂದಿದ್ದಾಗ ಕೈ ತುಂಬಾ ಸಂಪಾದನೆ ಆಯಿತೆಂದು ಫೋಟೋಗ್ರಾಫರರೊಬ್ಬರು ಸಂತೋಷದಿಂದ ಹೇಳಿದರು.

ಈ ಊರಿನಲ್ಲಿ ಚಿತ್ರೀಕರಿಸಲ್ಪಟ್ಟ ಅನೇಕ ಸಿನಿಮಾಗಳು ಭರ್ಜರಿ ಯಶಸ್ಸು ಕಂಡಿವೆ. ಶತದಿನೋತ್ಸವ ಸಂಭ್ರಮ ಆಚರಿಸಿಕೊಂಡಿವೆ. ಇಲ್ಲಿ ಚಿತ್ರೀಕರಣವಾದ ಶಿವರಾಜ್‌ಕುಮಾರ್, ಶಿಲ್ಪಾ ಅಭಿನಯದ 'ಜನುಮದ ಜೋಡಿ' ಹಾಗೂ ರಾಘವೇಂದ್ರ ರಾಜ್‌ಕುಮಾರ್ ಮಾಲಾಶ್ರೀ ನಟಿಸಿರುವ 'ನಂಜುಂಡಿ ಕಲ್ಯಾಣ' ಚಿತ್ರಗಳು ನಾಡಿನಾದ್ಯಂತ ಜಯಭೇರಿ ಬಾರಿಸಿ ಗಲ್ಲಾ ಪೆಟ್ಟಿಗೆ ಕೊಳ್ಳೆ ಹೊಡೆದಿವೆ.

ನಂಜುಂಡಿ ಕಲ್ಯಾಣದ ಸಿನಿಮಾದ 'ಒಳಗೆ ಸೇರಿದರೆ ಗುಂಡೂ.......' ಎಂದು ಆರಂಭವಾಗುವ ಸೂಪರ್ ಹಿಟ್ ಸಾಂಗ್ ಅನ್ನು ಈ ಊರಿನ ಒಂದು ಬೀದಿಯಲ್ಲಿ ಮಾಲಾಶ್ರೀ ಅಭಿನಯದ ಮೇಲೆ ಚಿತ್ರೀಕರಿಸಲಾಗಿದೆ. ರಾತ್ರಿ ವೇಳೆ ಕೇವಲ ಐದಾರು ತಾಸಿನಲ್ಲಿ ಚಿತ್ರೀಕರಿಸಲಾದ 'ಗುಂಡಿನ ಹಾಡು'ವಿನ ಮುಖಾಂತರ ಮಾಲಾಶ್ರೀ ದಿನ ಬೆಳಗಾಗುವುದರೊಳಗೆ ಕನ್ನಡ ಚಿತ್ರ ರಸಿಕರ ಮನಸೂರೆಗೊಂಡಿದ್ದು ಈಗ ಹಳೆಯ ಕಥೆ.

ಕರ್ನಾಟಕ ಅಷ್ಟೇ ಅಲ್ಲ; ಇಡೀ ಭಾರತೀಯ ಚಿತ್ರರಂಗದ ಇತಿಹಾಸದಲ್ಲಿಯೇ ಮಹದೇವಪುರ-ಅತ್ಯಧಿಕ ಸಿನಿಮಾಗಳನ್ನು ಚಿತ್ರೀಕರಿಸಲ್ಪಟ್ಟ ಚಿತ್ರ ಗ್ರಾಮವೆಂಬ ಹೆಗ್ಗಳಿಕೆಗೆ ಪಾತ್ರವಾಗಿ, ಗಿನ್ನಿಸ್ ದಾಖಲೆ ಸೇರುವ ಹಾದಿಯಲ್ಲಿದೆ. ಲೇಖಕ -*ಶಿವಳ್ಳಿ ಕೆಂಪೇಗೌಡ, ಮಂಡ್ಯ.*

# ಮಾತೊಳಗೆ ಮಾತ್

ಏ, ಏನಿಯಾ? ಎತ್ತ ಹೋಬುಟ್ಟಿದ್ದಾ?ಬೊಳ್ಳಗಿಳ್ಳಲಿ ಮನಿ ಕೊಚ್ಚಿ ಹೋಬುಟ್ಟಿದಾತ ಗ್ಯಾನ ಮಾಡಿದ್ವೆ. ಸಧ್ಯ ಒಳಲ್ಲಾ, ಏನ್ ಕಾರ್‌ಬಾರ್ ಮಾಡ್ತಾ ಒಳಾ? ಏನ್ ಕಥೆ. ಗದ್ದೆ ತೋಟ ಹೆಂಗುಟ್ಟು? ಮನೆ ಮಠ ಹೆಂಗುಟ್ಟು? ಹೆಣ್‌ಮಕ್ಕಯೆಲ್ಲಾ ಸೌಕ್ಯನಾ?ಮಕ್ಕಳ ಓದೆಲ್ಲಾ ಆತಾ? ಕೆಲ್ಸಗಿಲ್ಸಕೆ ಸೇರಿಯೊಳೋ ಹೆಂಗೆ? ನಿಂಗೇನಪ್ಪಾ ಮಕ್ಕ ಕೆಲ್ಸಕೆ ಸೇರೊಕುಂತೇನಿಲ್ಲೆ. ನೀ ಹೆಂಗೆಗೋ ಬೇಕಸ್ಟ್ ಮಾಡಿ ಇಸಿಯೊಳ. ಇನ್ನಾಕೆ ಅವುಕೆ ಕೆಲ್ಸ? ಅದಿರ್ಲಿ, ಕೈಲ್‌ಪೋದ್ ಗೌಜಿನ? ನೀ ಸಂಚಾರ ಗುಳಿಗ ನಂಗೆ ಆ ಊರು, ಈ ಊರು ಸುತ್ತಂವಲ್ಲ ಕೈಲ್ ಪೋದ್ ಬೇರೆಬೇರೆ ಊರ್‌ಲಿ ಬೇರೆಬೇರೆ ದಿನ ಮಾಡಿವೆ. ನಿಂಗೆ ಒಳೈದಾತ್‌ಬುಡು. ಅಲ್ಲಿ ಮುಗ್ಸಿ ಇಲ್ಲಿ,ಇಲ್ಲಿ ಮುಗ್ಸಿ ಅಲ್ಲಿ, ಸುತ್ತಾಡವುಕೆ ಗಮ್ಮತ್. ಬರಗಾಲ ಬರಗಾಲಂತ ಹಬ್ಬಕ್ಕೇನೂ ಬರಬಾತ್‌ಲೆ. ಅಲ್ಲ ಮಾರಾಯ, ನಾ ಅಟ್ಟೊತ್‌ಂದ ಒಂದೇ ಸಮ ಪ್ರಶ್ನೆ ಕೇಳ್ತಾಒಳೆ, ನೀ ಕಲ್ ಗುಂಡಂಗೆ 'ಉಮ್' ಮಾಡಿಕಂಡ್ ಕುದ್ದೊಳಲ್ಲಾ, ಅತ್ತೆಮುಂದೆ ಸೊಸೆ ಕುದ್ದಂಗೆ.

ಅಲ್ಲ ಭಾವಾ,ಒಳ್ಳ ಕೆ.ಕೆ. ಎಕ್ಸ್‌ಪ್ರೆಸ್ ರೈಲ್ ಓಡ್ದಂಗೆ ನೀಪ್ರಶ್ನೆ ಕೇಳಿರೆ ನಾ ಯಾವುದಕ್ಕೆ ಉತ್ತರ ಕೊಡ್ಲು? ಅದೆಲ್ಲಾ ಪ್ರಶ್ನೆ ಹಂಗೇ ಇರ್ಲಿ. ಈಗ ಯಾಲ ತೋಟ ಹೆಂಗುಟ್ಟುತ ಮಾತಾಡ್ವೊ. ಯಾಕೆಂತೇಳಿರೆ ಒಂದ್ ಕಾಲಲಿ ಕಾಫಿಗೆ ರೇಟ್ ಇರಕನ ಆ ಗಿಡದ ಎತ್ತರ, ದಪ್ಪ, ಕೊಂಬೆ ಎಲೆ, ಹೂ, ಕಾಯಿ, ಹಣ್‌ತ, ಮಾತಾಡ್ತಾ ಇದ್ವೊ. ಈಗ ಆ ತೋಟ ಕಾಡ್ ಕೂಡಿ ಅತ್ತ ಹೋಕೆ ಬತ್ತದೆ ಈಗ ಯಾಲ ತೋಟದೇ ಮಾತ್. ಯಾಲ ತೋಟನಾರ್ ಲಾಯ್ಕ ಉಟ್ಟಾ? ಹಾಳಾದ ಆ ತೋಟ ಹಾಳೇ ಆಗಿ ಹೋತು. ಇದ್ದಮರ ಪೂರಾ ಕಡ್ದೊ. ಕಾಫಿ ಗಿಡ ಇಸಿದೊ. ಈಗ ಯಾಲ ಬೆಳೆಕೊರೆ ನೆರಳ್ ಎಲ್ಲಿಟ್ಟು? ಒಂದ್ ಉಪಾಯ ಉಟ್ಟು. ಮನೆಯವೆಲ್ಲಾ ಒಂದೊಂದ್ ಕೊಡೆ ಹಿಡ್ಕಂಡ್ ಗಿಡಕ್ಕೆ ಮರೆ ನಿಲ್ಲೊಕು ಹಂಗಾಗುಟು ಕಥೆ. ಇಲ್ಲಿ ಕೆಲವು ಬುದ್ಧಿವಂತರೂ ಒಳೊ. ಅವು ಏನಾದರಾಗಲಿ ನಾ ಮಾತ್ರ ಯಾಲ ಬೆಳೆಯೋದು ಬುಡಿಕಿಲ್ಲೆತ ಹಠ ಮಾಡಿ ಅದರ ಬೆಳಿತಾ ಒಳೊ 'ಬಂದಸ್ಟ್ ಬರ್ಲಿ ಬರದೆಮ್ಮೆ ಹಾಲ್‌ತ' ಹೇಳ್ದಂಗೆ ವರ್ಷಂದ ವರ್ಷಕ್ಕೆ ನೂರ್ ಸಾವ್ರತಗಿಡ ಹಾಕಿ ಹಾಕಿ ತೋಟ ತುಂಬ್ಸಿ ಬುಟ್ಟೊಳೊ. ಈಗ ಅಂತವರ ಗೌಜಿಯೇ ಗೌಜಿ. ಕೆಲವುಕೆ ಒಳ್ಳ ಫಸಲೂ ಉಟ್ಟು. ಮಾಲೂ ಉಟ್ಟು, ರೇಟೂ ಉಟ್ಟು. ಬದುಕವು ಬದ್‌ಕಲಿ ಬುಡಿ. ಹಾಳಾದ ಈ ಜನ ಹೊಟ್ಟೆಕಿಚ್ಚ್ ಪಡುದು ಯಾಕೆ? ಮಣ್ ಕೆಂಪಾಕನ ಕಣ್ ಕೆಂಪಾದೆಗಡ - ಹಂಗೆ ಕೆಲ ಜನ ಹೊಟ್ಟೆಕಿಚ್ ಪಡ್ತಾ ಒಳೊ ಅಂಥವು ನೆಗ್ಗ್ದಿ ಬೀಳಲಿ ಬುಡಿ.

ಕತ್ತಲಾಕನ ಎಲಿಗ ಹೊರಗೆ ಬಂದಂಗೆ ಕೆಲವು ಕಳ್ಳಂಗ ಹೊರಗೆ ಬರ್ತಾ ಒಳೊತ ಸುದ್ದಿ. ಕಾಫಿಗೆ ರೇಟ್ ಇರಕನ ಕಾಫಿ ಹಣ್ ಕದೇತಿದ್ದೊ. ಈಗ ಯಾಲ ಕದಿತಾ ಒಳೊಗಡ. ಮೊನ್ನೆ ಒಬ್ಬ ಚಿಲ್ಲಿ ಹಾಕಿ ಬುಟ್ಟುತ್‌ಗಡ ಸೊಂಟದ ಕೆಳಗೆ. ಈಗ ಈ ಕಳ್ಳ ಆಸ್ಪತ್ರೆಲಿ ಉಟ್ಟುತ ಯಾರೋ ಹೇಳ್ತಿದ್ದೊ.

"ನೀವು ಹಿಂಗೇ ಮಾತಾಡಿಕಂಡೇ ಕುದ್ದರೆಯಾ, ಅಲ್ಲ ಉಂಬಕೆ ಎದ್ದರೆಯಾ? "ಹೆಣ್ ಒಳಗಿಂದೇ ಬಾಯಿಮಾಡ್ತ್. "ಓ..............ಬಂದೋ, ಬಂದೋ......" ತ ಹೇಳಿಕಂಡ್ ಇಬ್ಬರೂ ಎದ್ದೊ. ಉಂಬಕೆ ಕುದ್ದೊ "ಈಇಇಇ...ತುಕುಡ ಇಲ್ಲೆನೆ. ಚೆಟ್ಟಿ ಕೆಳಗೆ ನೋಡುತ" ಗಂಡ ಹೇಳ್ತ್. "ಹೌದೌದು, ಚೆಟ್ಟಿಕೆಳಗೆ ಮಸಿ ಉಟ್ಟು. ತುಕುಡಗಡ ತುಕುಡ. ಕೈಲ್ ಪೊದ್ ಕಳ್ದ್ ದಿನ ಎಸ್ಟಾತ್‌ತಾರ್‌ಗ್ಯಾನ ಉಟ್ಟಾ. ಬಟ್ಲ್‌ಗೆ ಕೈ ಕುತ್ತ್‌ಕನ ನೀವಿಗೆ ತುಕುಡ ಬೇಕ್‌ತ" ಹೆಣ್ಣ್ ಗೊರ ಗೊರಾತ ಹೇಳ್ತ್. ಅದ್ ಹೋಗಲಿ, "ಕುಪ್ಪಿ ಕೆಳಗೆ ಏನಾರ್ ಉಟ್ಟಾ" ನೋಡುತ ಗಂಡ ಹೇಳ್ತ್. ಕುಪ್ಪಿ ಕೆಳಗೆ ನೀರ್ ಉಟ್ಟು. ಇದ್ದರ ಪೂರ ಹೀರಿ ನೀರ್ ಹಾಕಿ ಕುಲುಕಿ ಕುಡ್ದ ಮೇಲೆ ಅಲ್ಲಿ ಏಂತ ಇದ್ದದೆ. ಈಗ ಸುಮ್ಮಗೆ ಪಿರಿ ಪಿರಿ ಹೇಳ್‌ಬಡಿ. ನಂಟಂಗೆ ಬೇಜಾರ್ ಮಾಡಬಡಿ. ನಿಮ್ಮದ್ ಯಾಗೋಳು ಇದೇ ಹಣೆ ಬರತ ಹೆಣ್ ಬರಬರಾತ ರಾಗ ಎಳ್ತ್. ಉಂಬಕನ ನಿಮ್ಮ ಮನೆಲೂ ಇದೇ ರೀತಿ ಪರ ಪರಾ / ಪಿರಿ ಪಿರಿ ಉಟ್ಟಾ?

ಬಿ. ಆರ್. ಜೋಯಪ್ಪ, ಮದೆ.

# ಉಪ್ಪಿಯ ರೈಲು

ಒಮ್ಮೆ ಉಪೇಂದ್ರ ಸೂಟಿಂಗ್‌ಗೆತ ರೈಲ್‌ಲಿ ಹೋಗ್ತಿರ್‌ಕನ ಹಿಂಗಾತ್. ಉಪ್ಪಿಗೆ ಸಕತ್ ನಿದ್ದೆ ಬಾತ್. ಎದರ್‌ಗಡೆ ಕುದ್ದಿದವನ ಕೈಗೆ ನೂರು ರೂಪಾಯಿ ಕೊಟ್ಟ್ ನನ್ನ ಸ್ಟೇಷನ್ ಬಾಕನ ಏಳ್ಸತ ಹೇಳ್ತ್. ಎದರ್‌ಗಡೆ ಕುದ್ದಿದದ್ ಮುತ್ತುರಾಜ್. ಅವಂಗೂ ಪಾಪ ಅನ್ಸಿತ್. ಫ್ರೀಯಾಗಿ ಕ್ಷೌರ ಮಾಡಂವ ನಾನ್, ಈಯಪ್ಪ ನೂರ್ ರೂಪಾಯಿ ಬ್ಯಾರೆ ಕೊಟ್ಟುಟು. ಕಟ್ಟಿಂಗ್ ಮಾಡ್ಸದೆ ಸಾವಿರಾರ್ ವರ್ಷಾದಂಗೆ ಕಂಡದೆ. ಮತ್ತು ಮೆಲ್ಲೆ ಉಪ್ಪಿಗೆ ನೀಟಾಗಿ ಹೇರ್‌ಕಟ್ ಮಾಡ್ಡೆ, ಗಡ್ಡನ ನುಣ್ಣಗೆ ಬೋಳ್ಸಿದೆ. ಉಪ್ಪಿ ಹೇಳ್ದ ಸ್ಟೇಷನ್ ಬಾಕನ ಎಳ್ಸಿದೆ. ಉಪ್ಪಿ ಇಳ್‌ದ್ ಸೂಟಿಂಗ್ ಸ್ಪಾಟ್‌ಗೆ ಹೋದೆ. ಮೇಕಪ್ ರೂಮಿಗೆ ಹೋಗಿ ಕನ್ನಡಿ ಮುಂದೆ ನಿಲ್ಲನ ಬೆಚ್ಚಿ ಬಿದ್ದದೆ. ಬಡ್ಡೀ ಮಂಜ್ಜ ಕಚಡಾನನ್ಮಂಜ್ಜ, ಹಲ್ಕನನ್ಮಂಜ್ಜ, ಲೋಫರ್ ನನ್ಮಂಜ್ಜ, ಪೂರ್ತಿ ಕುಡ್ದ್ ಬಂದಿತ್ತ್‌ತ ಕಂಡದೆ ತಾ ಬೈಕಂಡಿರ್ಕನ ಗಾಬರಿಲಿ ಅಲ್ಲಿಗೆ ಓಡಿಬಂದ ಪ್ರೊಡ್ಯುಸರ್ ಏಂತಾತ್ ಸರ್‌ತಾ ಕೇಳ್ದಿ. ಅದೆಂತ ನಿನ್ನಲೆ..... ನೋಡಿಲ್ಲಿ ಆ ಕಳ್ಳ ನನ್ಮಂಗಂಗೆ ಸ್ಟೇಷನ್ ಬಾಕನ ಎಳ್ಸ್‌ತಾ ಹೇಳಿ ನೂರ್ ರೂಪಾಯಿ ಕೊಟ್ರೆ ಇವಂನೋಡು ಬ್ಯಾರೆ ಯಾರ್‌ನ್ನೊ ಎಳ್ಸಿ ಇಳ್ಸಿಟು ತಾ ಕನ್ನಡಿನ ತೋರ್ಸಿಕಂಡ್ ಉಪ್ಪಿ ಹಾರಾಡ್ತ್.

ಚೇಯಪನ ಚರಣ್, ಬಲಮುರಿ.

# ನಗೆ ಹನಿಗ

ಯತೀಶ್ : ತಲ್ಲೆ ನಿಂಗೆ ಏಂತರ ಆದ್ ?

ಸತೀಶ್ : ಹೆಂಣ್ ನಿನ್ನೆ ಹೂಗಿಡಲಿ ಹೊಡ್ದ್‌ಬುಡ್ತ್‌ರ

ಯತೀಶ್ : ಅಲ್ಲರ ಹೂಗಿಡಲಿ ಹೊಡ್ದರೆ ಇಷ್ಟ್ ದೊಡ್ಡ ಗಾಯ ಹೆಂಗೆರ ಆದು?

ಸತೀಶ್ : ಏಂತರ ಹೇಳ್ಲಿ, ಹೂ ಒಟ್ಟಿಗೆ ಚೆಟ್ಟಿನೂ ಇತ್ತ್‌ತ.

- ಕೊಟ್ಟಕೇರಿಯನ ಉಷಾ, ಬಲಂಬೇರಿ

*ಬಾಲ ಸಂಗಾತಿ ವಿಭಾಗ : ಕತೆ 5*

## ಪೆಟ್ಟಿಗೆಲಿ ಎಂಥ ಉಟ್ಟು

ಒಂದ್ ಊರ್‌ಲಿ ಒಂದು ಅಜ್ಜಿ ಇತ್ತ್. ಅವಳಿಗೆ ನಾಲ್ಕ್ ಮಕ್ಕ ಇದ್ದೊ. ಅಜ್ಜಿ ಅವುಳ ಎಪ್ಪತ್ತನೆ ವಯಸ್‌ಲಿ ಮಕ್ಕಳನ್ನೆಲ್ಲಾ ಕರ್ದ್ ತನ್ನ ಹತ್ರ ಇದ್ದ ಹಣ ಒಡವೆಗಳ್‌ನ್ನೆಲ್ಲಾ ಸಮಾನ ಆಗಿ ಹಂಚಿ ಕೊಟ್ಟ್ ತಾನೆ ಮೂರ್ ಮೂರ್ ತಿಂಗ ಒಬ್ಬೊಬ್ಬರ ಮನೆಲಿ ಇದ್ದನೆತ ಹೇಳ್ದೆ.

ಅಜ್ಜಿ ಹೇಳ್ದಂಗೆ ಮಕ್ಕಳ ಮನೆಗೆ ಹೋದೆ. ಸುರು ಸುರುಲಿ ಅಜ್ಜಿನ ಮಕ್ಕ ಬಾಳ ಆದರಲಿ ಬರಮಾಡಿಕೊಂಡ್ ಲಾಯಿಕ್ ನೋಡಿಕೊಂಡೊ. ಬರ್ತಾ ಬರ್ತಾ ಅಜ್ಜಿ ಬಾಕಾಕನ ಮುಖ ಸಿಂಡರಿಸಿಕಂಡೊ. ಒಳಗೆ ಹೋಗಿ ಅಜ್ಜಿ ಬಹಳ ಬೇಜಾರ್ ಆಗಿ ದಿನ ನೂಕ್‌ತ್ತಿತ್ತ್.

ಒಂದು ದಿನ ಕಟ್ಟೆ ಮೇಲೆ ಅಜ್ಜಿ ಕುದ್ದಿರ್‌ಕನ ಅಜ್ಜಿನ ಹಳೆ ಸ್ನೇಹಿತೆ ಸಿಕ್ಕದೆ. ತುಂಬಾ ಹೊತ್ತ್ ಕುದ್ದ್‌ಕಂಡ್ ಮಾತಾಡಿವೆ. ಈ ಅಜ್ಜಿನ ಯಾಕೆ ಒಂದು ತರಾ ಬೇಜಾರಲಿ ಒಳ ಅಲಾತ ಕೇಳ್ದೆ. ಆಗ ಅಜ್ಜಿ ನಡ್ದ ಕತೆನ ಹೇಳ್ದೆ. ಅಯ್ಯೋ ಅದ್‌ಕ್ಯಾಕೆ ಬೇಜಾರ್ ನಾನೊಂದು ಉಪಾಯ ಹೇಳ್ಕಿತ್ತೇಳಿ ಅಜ್ಜಿನ ಕಿಮಿಲಿ ಪಿಸ ಪಿಸತ್ತೇಳ್ದೆ. ಸ್ನೇಹಿತೆ ಹೋದ ಮೇಲೆ ಅಜ್ಜಿ ಮನೆಗೆ ಹೋಗಿ ಎಲ್ಲವೂ ನೋಡುತ್ತಿದ್ದಂಗೆ ಯಾರಿಗೂ ಹೇಳದೆ ಎಲ್ಲಿಗೋ ಹೋದೆ. ಮಕ್ಕ ಮುಖ ಮುಖ ನೋಡಿಕಂಡ್ ಸುಮ್ಮನೆ ಇದ್ದೊ. ಸುಮಾರ್ ಹೊತ್ತಾದ ಮೇಲೆ ಅಜ್ಜಿ ವಾಪಾಸ್ ಬಂದದೆ ಬಾಕನ ಅಜ್ಜಿನ ಕೈಲಿ ಒಂದು ಹಳೆ ಪೆಟ್ಟಿಗೆ ಇದ್ದದೆ. ಮಣ್ಣ್ ಮೆತ್ತಿದ ಬಟ್ಟೆ ಪೆಟ್ಟಿಗೆನ ನೋಡಿ ಮಕ್ಕ ವಿಚಾರಿಸುವೆ . ಆಗ ಅಜ್ಜಿ ಹೇಳ್ದೆ. ನಿಮ್ಮ ಒಳ್ಳೆದಕ್ಕೆತ ಸ್ವಲ್ಪ ಹಣನ ಕೂಡಿ ಇಟ್ಟಿದ್ದೆ. ನನ್ನ ಮರಣ ನಂತರ ನೀವೆಲ್ಲಾ ಹಂಚಿಕಣಿತ್ತೇಳ್ದೆ. ಈ ಅಜ್ಜಿನ ಎಲ್ಲವೂ ಬಾಳ ಲಾಯಿಕ್ ನೋಡಿಕಂಡನೆ. ಅಜ್ಜಿನ ಪ್ರೀತಿನ ಗಳ್ಸಿಕಣಿಕೆ ಸೊಸೆಕ ನಾನ್ ಮೇಲ್ ತಾನ್ ಮೇಲ್‌ತ ನೋಡಿಕಂಡವೆ. ಅಜ್ಜಿ ತನ್ನ ಸ್ನೇಹಿತೆಗೆ ಮನ್ಸಲೆ ವಂದಿಸಕಂಡ್ ಖುಷಿಲಿ ಇತ್ತ್. ಒಂದು ದಿನ ಅಜ್ಜಿ ತೀರಿ ಕಂಡಂದೆ. ಕಾರ್ಯ ಎಲ್ಲಾ ಮುಗ್ದಂಗೆ ಮಕ್ಕ ಪೆಟ್ಟಿಗೆನ ನೋಡಿಕೆ ಸುರು ಮಾಡ್ದೊ. ಅಷ್ಟೊತ್ತಿಗೆ ಅಜ್ಜಿದ್ ಸ್ನೇಹಿತೆ ಒಂದು ಕೀ ತಂದ್ ಕೊಟ್ಟ್ ಹೇಳ್ದೆ. ನನ್ನ ಮರಣಾನಂತರ ಕೊಡ್‌ತ ನಿಮ್ಮ ಅವ್ವ ಕೊಟ್ಟಿತ್ತ್‌ತೇಳಿ ಸ್ನೇಹಿತೆ ಹೊರ್ಟ್‌ಹೋದೆ. ಮಕ್ಕ ಅವಸರಲಿ ಪೆಟ್ಟಿಗೆ ತೆಗ್ದ್ ನೋಡಿವೆ. ಬರಿ ಕಲ್ಲ್‌ಗ. ಒಳಗಡೆ ಒಂದು ಸಣ್ಣ ಚೀಟಿಲಿ ಅಜ್ಜಿ ಬರ್ದ್‌ದ್ ಸಿಕ್ಕದೆ. ಮಕ್ಕ ಅದರ ಬಿಚ್ಚಿ ಓದುವೆ. " ನಿಮಿಗೆಲ್ಲಾ ಬಾಳ ನಿರಾಶೆ ಆಗಿದ್ರು ನನ್ನ ಕ್ಷಮಿಸಿ. ನನ್ನತ್ರ ಇದ್ದದ್ದೆಲ್ಲಾ ಮೊದ್ಲೆ ನಿಮಿಗೆ ಕೊಟ್ಟಿದ್ದೆಲ್ಲಾ " ನಿಮಿಗೆ "ಜೀವನತ್ತೇಳ್ರೆ ಬರಿ ಹಣ ಒಂದೇ ಅಲ್ಲ"ತ ತಿಳ್ಸೊಕುತ ನಾನೀರೀತಿ ಮಾಡ್ದೆ. ಅದರ್ನ ಓದಿ ಮಕ್ಕ ನಾಚಿಕೆಲಿ ತಲೆ ತಗ್ಗಿಸಿದೊ.

- ಮುಂದುವರ್ದದೆ.

- ಬಿಟ್ಟೀರ ಚೊಂದಮ್ಮ, ಶಂಭು

## ಹುತ್ತೇರಿ ಹಬ್ಬ ನಮ್ಮದ್

ಬಾತ್ ನಮ್ಮ ಕೊಡಗಿನ ಹುತ್ತೇರಿ
ಬನ್ನಿ ಆಚರ್‌ಸನೋ ಒಟ್ಟಾಗಿ ಸೇರಿ
ಅಟ್ಟಿ ಅಡಿಗಳ ಗುಡ್ಸೋಕು ಕರಿ
ಅಂಗಳ ನೆಲಗಳ ಸಾರ್ಸ್‌ಕು ಸರಿ

ಎಲ್ಲಾವರ ಮನೆನೂ ಮದುವಣಗಿತ್ತಿ
ಗೋಡೆಗೆ ತರ ತರ ಸುಣ್ಣನು ಮೆತ್ತಿ
ಕಟ್ಟಿಕು ಬಣ್ಣದ ಚೆಂಡು ಹೂ ಮಾಲೆ
ಸೇರ್ಸ್‌ಕು ಮಧ್ಯೆ ಮಾವಿನ ಎಲೆ

ಕೈ ಬೀಸಿ ಕರ್ದ್‌ದೆ ಭತ್ತದ ತೆನೆಗ
ಇದನ್ನೇ ಸಾರಿ ಹೇಳುವೆ ತರ ತರ ಹಕ್ಕಿಗ
ಹುತ್ತೇರಿ ಗೆಣ್ಸ್ ಎಳ್ಳುದು ಜೋರ್
ಐದ್ ತರದ ಘಮ ಘಮ ಸಾರ್

ಮನೆವೆಲ್ಲಾ ಒಂದಾಗಿ ಸೇರ್ದು
ನೆರೆಕಟ್ಟುದು, ಕದ್‌ರ್ ಕೊಯ್ಯುದು
ಪೊಲಿ ಪೊಲಿಯೇ ಬಾತ ಕರಿಯದು
ಮನೆ ಮನೆಲೂ ಅಡಿಕೆಟ್ಟ್ ತಂಬಿಟ್ಟ್

ತಿಂದ್ ಹೋಡ್ದ್‌ವೆ ಹುತ್ತೇರಿ ಕೋಲಾಟ
ನೋಡಿಕೆ ಕಣ್ಣಿಗೆ ಎಷ್ಟೊಂದು ಬೊಂಬಾಟ್
ಮಕ್ಕಳಿಗೆ ಬೇಕು ಢಂಢಂ ಪಟಾಕಿ
ಹೆಚ್ಚ್ ಕಡಿಮೆ ಅದರ್‌ಲ್ಲೂ ಲಾಟಾಪಟಿ

ಹುತ್ತೇರಿ ಹಬ್ಬದ ಸಡಗರದ ಕೊಡಗ್
ಶುರಾಗುಟ್ಟು ಈಗಳೇ ಮಂಜಿನ ಬೆಡಗ್
ಕೊಡಗಲೀ ಹುಟ್ಟಿದ ನಾವೆಷ್ಟು ಪುಣ್ಯರ್
ಜಾತಿ ಭೇದನೆಲ್ಲಾ ಅಳ್ಸ್‌ನೋ

ಒಂದೇ ಭಾವಕ್ಯತೆನ ಬೇಳ್ಸ್‌ನೋ
ಬಾತ್ ನಮ್ಮ ಕೊಡಗಿನ ಹುತ್ತೇರಿ
ಬನ್ನಿ ಆಚರ್‌ಸನೋ ಒಟ್ಟಾಗಿ ಸೇರಿ

ಅಣ್ಣಚೀರಾ ಭಾರತಿ
ಮಕ್ಕಂದೂರು ಗ್ರಾಮ

## ಶಾಲೆಲಿ ಹೇಳಿ ಕೊಟ್ಟದ್ದೆಲ್ಲಾ ನಿಜ ಅಲ್ಲ

*ಬಾಲ ಸಂಗಾತಿ ವಿಭಾಗ : ಜ್ಞಾನ 5*

***ಬೋಧಾಯನ ಸೂತ್ರ***

ಇಂದ್ ನಾವು ಫೈಥಾಗೋರಸ್ ಪ್ರಮೇಯಂತ ಯಾವುದನ್ನ ಕರ್‍ದವೆಯೋ ಅದನ್ನ ಪೈಥಾಗೊರಸ್‌ಗಿಂತ ಒಂದು ಸಾವಿರ ವರ್ಷಗಳ ಹಿಂದೆನೆ ಋಷಿಗಳಾದ ಬೋಧಾಯನರು ಮತ್ತೆ ಕಾತ್ಯಾಯನರು ತಮ್ಮ ಗ್ರಂಥಿಗಳ್ಲಿ ಪ್ರತಿಪಾದನೆ ಮಾಡಿ ವಿವರಿಸಿಯೊಳೊ.

***ಭೋದಾಯನರ ಶ್ಲೋಕ ಹಿಂಗುಟ್ಟು***

ದೀರ್ಘ ಚತುರಸ್ರಸ್ಯಾಕ್ಷ್ಣಯಾ ರಜ್ಜು: ಪಾರ್ಶ್ವಮಾನೀ ತಿರ್ಯಗ್‌ಮಾನೀಚ ಯತ್ ಪೃಥಗ್‌ಭೂತೇ ಕರುತಸ್ತದು ಭಯಂ ಕರೋತಿ|| ನಾನಾ ಪ್ರಕಾರದ ಯಜ್ಞ ವೇದಿಕೆಗಳ ನಿರ್ಮಾಣ ಕ್ರಮಲಿ ಈ ಕ್ರಮನ ಅನುಸರಿಸ್‌ತ್ತಿದ್ದೊ. ಚತುಷ್ಕೋಣ ವೇದಿಕೆ. ಸಮಕೋಣ ವೇದಿಕೆ, ಸಮದ್ವಿಭುಜಾಕೃತಿ ವೇದಿಕೆ, ಚತುರ್ಭುಜಾ ಕೃತಿ ವೇದಿಕೆ ಮುಂತಾದವನ್ನ ನಮ್ಮ ಹಿಂದಿನವು ಯಜ್ಞಗಳ್‌ಲಿ ಬಳ್‌ಸ್‌ತ್ತಿದ್ದೊ.

"ಫೈ"ಯ ಬೆಲೆ :-

ಎಲ್ಲಕ್ಕಿಂತ ಮೊದಲೇ ಆರ್ಯಭಟ್ಟ ಪೈ ($\pi$) ಯ ಬೆಲೆನ ಕಂಡ್ ಹಿಡ್ದೊಳೊ. ಅವು ಕಂಡ್ ಹಿಡ್ದ ಬೆಲೆ

($\pi$) = 3-1416

ಆಧುನಿಕರ್ ಹೇಳುವ ಬೆಲೆ $\pi$ = 3.1416926 ಇದರ ವಿವರಣೆನ ಕೊಡುವ ಆರ್ಯಭಟ್ಟನ ಶ್ಲೋಕ ಹಿಂಗ್ಯುಟ್ಟು.

ಚತುರಧಿಕಂ ಶತಮಷ್ಟಗುಣಂ ದ್ವಿಷಷ್ಟಿಸ್ತಥಾ ಸಹಸ್ರಾಣಾಂ|
ಅಯುತದ್ವಯ ವಿಷ್ಕಂಭಸ್ಯಾಸನ್ನೋ ವೃತ್ತಪರಿಣಾಹಃ ||

ತ್ರಿಕೋಣ ಮಿತಿ :-

ಭಾರತವು ಸಮಗ್ರ ಪ್ರಪಂಚಕ್ಕೆ ನೀಡಿದ ಕೊಡುಗೆಗಳ್‌ಲಿ ತ್ರಿಕೋಣಮಿತಿ ಮಹತ್ವದಾಗ್ಯುಟ್ಟು. ತ್ರೀಕೋಣ ಮಿತಿಯ ಕ್ಷೇತ್ರಲಿ ಭಾರತೀಯರ್ "ಜ್ಯಾ" ಮತ್ತೆ "ಕೋಟಿಜ್ಯಾ" ತ್ತೇಳುವ ಶಬ್ದಗಳ್‌ನ ಬಳ್‌ಸ್‌ತ್ತಿದ್ದೊ. ಅವುಗಳ್ನೆ ಇಂದ್ ಯುರೋಪ್‌ನ ಭಾಷೆಲಿ "ಕೋಸೈನ್" ತ್ತೇಳಿ ಬಳ್‌ಸತ್ತಾ ಒಳೊ.

ಆರ್ಯಭಟ್ಟ (ಮೊದಲನೆಯಂವ) "ಜ್ಯಾ ಕೋಷ್ಟಕ" ನ ರಚಿಸಿದ್ದ. ಅದರ್ಲಿ 0.90° ವರೆಗಿನ ಕ್ಷೇತ್ರಲಿರುವ ಗೋಲ ಖಂಡಗಳ ರೇಖೆಗ ನಿರ್ದೇಶಿಸ್ಪಟ್ಟಿದ್ದೊ. ಭಾರತೀಯ ಖಗೋಲಶಾಸ್ತ್ರಲಿ ಗ್ರಹಗಳ ಸ್ಥಾನಗಳ್ನ ನಿಶ್ಚಯಿಸಿಕ್ಕಾಗಿ ತ್ರಿಕೋಣ ಮಿತಿಯ ಅನೇಕ ಅಂಶಗಳ್ನ ಉಪಯೋಗಿಸ್ ಲಾಗ್‌ತ್ತಿತ್.

-ಮುಂದುವರ್ದದೆ.

- ಬಿಟ್ಟೀರ ಚೊಂದಮ್ಮ, ಶಂಭು

## ಗೌಡರು :

ಕೊಡಗು ಮತ್ತು ದಕ್ಷಿಣಗನ್ನಡ ಜಿಲ್ಲೆಗಳಲ್ಲೂ ಕೇರಳದ ಕಾಸರಗೋಡು , ಮೈಸೂರು ಜಿಲ್ಲೆಯ ಪಿರಿಯಾ ಪಟ್ಟಣ ಹುಣಸೂರು ಕಾಲೇಜಿನಲ್ಲು ಹಾಸನ ಜಿಲ್ಲೆಯ ಅರಕಲಗೋಡು ಮತ್ತು ಸಕಲೇಶಪುರ ತಾಲ್ಲೂಕುಗಳಲ್ಲೂ ಇತ್ತೀಚೆಗೆ ಮೈಸೂರು ಮತ್ತು ಬೆಂಗಳೂರು ನಗರಗಳಲ್ಲಿ ನೆಲಸಿರುವ "ಗೌಡ"ರು ಅರೆಗನ್ನಡ ಭಾಷೆ ಮತ್ತು ತುಳು ಭಾಷೆಯನ್ನು ಮಾತಾಡುತ್ತಾರೆ. ಗೌಡರು ವಿಜಯನಗರ ಕಡೆಯಿಂದ ಇಕ್ಕೇರಿ ರಾಜ್ಯಕ್ಕಾಗಿ ಹಾಸನದ ಐಗೂರುಸೀಮೆ ಮೂಲಕ ದಕ್ಷಿಣ ಕನ್ನಡಕ್ಕೆ ಬಂದ ಕೆಲವರು ಕೊಡಗಿಗೆ ಬಂದು ನೆಲಸಿದರು. ವಿಜಯನಗರದಲ್ಲಿ ಒಂದು ನೆಲೆಸುವುದಕ್ಕೆ ಮೊದಲು ಇವರು ಬಂಗಾಲದ ಗೌಡ ದೇಶ ಗಂಗಾ ಯುಮುನಾ ಹಾಗೂ ಸಿಂಧ್ಯ ನದಿ ಕಣಿವೆಗಳ ಅರೆಗನ್ನಡ ನಾಗರೀಕತೆಗಳು ಪಡೆದ ಜನಾಂಗದ ಗುಂಪಿನವರೆಂದು ಚರಿತ್ರೆಗಾರರ ಲಭ್ಯ. ಗೌಡರಿಗೆ ಹದಿನೆಂಟು ಗೋತ್ರಗಳಿವೆ ಇವರು ಶ್ರೀ ವೆಂಕಟೇಶ್ವರನನ್ನು ಮನೆ ದೇವರಾಗಿ ಪೂಜಿಸುತ್ತಾರೆ. ಸಬ್ಬಮ್ಮ ಸುಬ್ಬಮ್ಮ ದೇವರಿಗೆ ಮದುವೆಯಲ್ಲಿ ಹರಕೆ ಹಣ ಕಟ್ಟುತ್ತಾರೆ. ಭೂತಾರಾಧನೆ ಇವರಲ್ಲಿ ಸಾಮಾನ್ಯ. ಇವರು ಚಾಮುಂಡಿ, ಗುಳಿಗ, ಪಾಷಾಣಮೂರ್ತಿ ಮುಂತಾದ ಭೂತ ಗಳನ್ನೂ ಆರಾಧಿಸುತ್ತಾರೆ. ಗೌಡರಲ್ಲಿ ಉಪಜಾತಿ ಇಲ್ಲ. ಇವರು ಸತ್ತವರನ್ನು ಸುಡುತ್ತಾರೆ.

ಇವರು ಅರೆಗನ್ನಡಭಾಷೆ ಮತ್ತು ತುಳು ಭಾಷೆಯನ್ನು ಮಾತಾಡುತ್ತಾರೆ.

## *ಲೇಖಕನ ನಿವೇದನೆ :*

ಈ ಹಿಂದೆ ಒಕ್ಕಲಿಗರ ವಿಷಯ ಸೂಕ್ಷ್ಮವಾಗಿ ಬೇರೆ ಬೇರೆ ಗುಂಪಿನ ಒಕ್ಕಲಿಗರ ಪದ್ಧತಿಗಳಿಗೂ ಗೌಡರ ಪದ್ಧತಿಗಳಿಗೂ ಇರುವ ವ್ಯತ್ಯಾಸವನ್ನು ಕೊಟ್ಟಿದ್ದೇನೆ. ಏನೆಂದರೆ ಗೌಡರಿಗೂ ವಿವಾಹ ಸಂಬಂಧ ಇದ್ದರೂ ಇವರೆಲ್ಲರೂ ಬೇರೆ ಬೇರೆ ಗುಂಪಿನವರು. ಇವರ ಪದ್ಧತಿಗಳೂ ಬೇರೆ ಬೇರೆಯಾಗಿವೆ. ಕೆಲವರು ಒಕ್ಕಲಿಗರೂ ಗೌಡರು ಒಂದೇ ಎಂದು ಹೇಳಿಕೊಳ್ಳು ವುದಕ್ಕೆ ಈ ಲೇಖನ ಉತ್ತರವಾಗಿದೆ. ಎಲ್ಲಿಯವರೆಗೆ ಭಾರತೀಯ ಸಂವಿಧಾನದಲ್ಲಿ ಹಿಂದುಳಿದ ಪಂಗಡಗಳ ಸಲಕರಣೆ ಇರುವವರೆಗೂ ಗೌಡರ ಹೆಸರು ಮುಂದುವರಿಯಲೇಬೇಕು. ಅದೂ ಅಲ್ಲದೆ ಭಾರತೀಯ ಸಂಸ್ಕೃತಿ ಜಾತಿ ಪದ್ಧತಿಗಳ ಮೇಲೆ ಹೆಣೆದಿರುವುದರಿಂದ ಗೌಡ ಜನಾಂಗವನ್ನು ಉದ್ಧರಿಸಿಕೊಂಡು ಹೋಗುವುದು ಅತೀ ಅವಶ್ಯವಾಗಿದೆ. ಗೌಡರು ತನ್ನತನವನ್ನು ಉಳಿಸಿಕೊಳ್ಳಲೇಬೇಕು.

ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ "ಗೌಡ" ಎಂಬ ಹೆಸರು ಪ್ರತ್ಯೇಕವಾಗಿ ಮುಂದುವರಿಯದಿದ್ದರೆ ಶೇಕಡಾ 50% ಕ್ಕಿಂತ ಹೆಚ್ಚು ಸಂಖ್ಯೆಯಲ್ಲಿರುವ ಬಡತನದ ರೇಖೆಯ ಕೆಳಗಿರುವ ಬಡ ಜನರ ಮಕ್ಕಳಿಗೆ ವಿದ್ಯಾರ್ಥಿ ವೇತನ, ತಾಂತ್ರಿಕ, ವೈದ್ಯಕೀಯ ವ್ಯವಸಾಯ, ಪಶು ಸಂಗೋಪನೆ, ಕಾಲೇಜುಗಳಲ್ಲಿ ಹಿಂದುಳಿದ ವರ್ಗದವರಿಗೆ ಮೀಸಲಾಗಿಟ್ಟ ಸೌಲಭ್ಯ, ರಾಜ್ಯ ಮತ್ತು ಕೇಂದ್ರ ಸರ್ಕಾರದ ನೌಕರಿಗಳಲ್ಲಿ ಹಿಂದುಳಿದ ಪಂಗಡಗಳಿಗೆ ಮೀಸಲಾಗಿದ್ದ ಪಟ್ಟಿಯಲ್ಲಿ ಸೇರ್ಪಡೆಯಾಗದೆ ತೊಂದರೆ ಯಾದೀತು. ಇದಕ್ಕೆಲ್ಲಾ ಸಮಾಜದ ಧುರೀಣರು ಒಗ್ಗಟ್ಟಲ್ಲಿ ಒಂದೇ ನಿಲುವನ್ನು ತಾಳಿ ಈಗಿರುವ ಬೇರೆ ಬೇರೆ ರೀತಿಯ ಅಭಿಪ್ರಾಯವನ್ನು ಬದಲಾಯಿಸಬೇಕು. ರಾಜಕೀಯ ಪ್ರಯೋಜನಕ್ಕಾಗಿಯೇ ಈಗಾಗಲೇ ವಿವಾಹ ಸಂಬಂಧ ಏರ್ಪಟ್ಟ ಕಾರಣದಿಂದಲೇ ಅಥವಾ ಪ್ರತಿಭಾವಂತ ವ್ಯಕ್ತಿಗಳ ಪರಿಚಯ ಸ್ನೇಹಚಾರದಿಂದಾಗಿ ಈ ವಿಷಯದಲ್ಲಿ ಹಿಂದೇಟು ಹಾಕಿದರೆ

17 ನೇ ಪುಟಕ್ಕೆ

## ದಶ ದಿಕ್ಕುಗಳಿಗೂ 'ಗೌಡ ಧ್ವನಿ' ಮೊಳಗಿಸಿದ ಗೌಡವತಿಯರು.

**ದಸರಾ ಪ್ರಯುಕ್ತ ಗೌಡ ಮಹಿಳಾ ಒಕ್ಕೂಟದಿಂದ ನೃತ್ಯ ಕಾರ್ಯಕ್ರಮ.**

ಮೋಡ ಮುಸುಕಿದ ವಾತಾವರಣ, ತುಂತುರು ಮಳೆ, ಕುಳಿರ್ಗಾಳಿ, ಮಧ್ಯೆ ನೆರೆದ ಜನ ಸಾಗರದ ಮುಂದೆ ಮಡಿಕೇರಿ ದಸರಾ ಜನೋತ್ಸವವಾಗಿ ದಿನಾಂಕ 15/10/02 ರ ರಾತ್ರಿ ವಿಜೃಂಭಿಸಿತು. ಕವಿದ ಗಾಡಾಂಧಕಾರವನ್ನು ದೂರ ಸರಿಸಿದ ವಿದ್ಯುಲಂಕೃತ ದಶಮಂಟಪಗಳು ದುಷ್ಟ ಶಕ್ತಿಯ ನಿರ್ಮೂಲನೆಯ ಸಾರವನ್ನು ದಶ ದಿಕ್ಕುಗಳಿಗೂ ಸಾರಿದವು. ಆದರೆ ಅದಕ್ಕೆ ಒಂದು ದಿನ ಮೊದಲೇ ಗೌಡ ಯುವತಿಯರು ಮಡಿಕೇರಿಯ ಗಾಂಧೀ ಮೈದಾನದ ತೆರೆದ ಮಂಟಪದಲ್ಲಿ ಗೌಡ ಧ್ವನಿಯನ್ನು ಮೊಳಗಿಸಿ, ತಾಳಕ್ಕೆ ತಕ್ಕಂತೆ ಹೆಜ್ಜೆ ಹಾಕಿ, ಮಳೆಯನ್ನೂ ಲೆಕ್ಕಿಸದೆ ಜಮಾಯಿಸಿದ ಸಹಸ್ರಾರು ನೃತ್ಯ ಪ್ರೇಮಿಗಳ ಹೃದಯಕ್ಕೆ ಲಗ್ಗೆ ಯಿಟ್ಟಿದ್ದೇ ಅಲ್ಲದೆ ತಮ್ಮ ಸಾಮರ್ಥ್ಯವನ್ನು ಪ್ರತಿಬಿಂಬಿಸಿದರು.

ಅಕ್ಟೋಬರ್ 14 ರಂದು ಆಯುಧ ಪೂಜೆ ದಿನ ಇಡೀ ಮಡಿಕೇರಿ ನಗರ ಶೃಂಗರಿಸಿಕೊಂಡು ಮರುದಿನದ ವಿಜಯದಶಮಿಯನ್ನು ಸ್ವಾಗತಿಸಲು ಅಣಿಯಾಗಿತ್ತು. ಅದೇ ದಿನ ಸಂಜೆ ಮಡಿಕೇರಿಯ ಗಾಂಧಿ ಮಂಟಪದ ಸಭಾಂಗಣದಲ್ಲಿ 2 ದಿನದ ನೃತ್ಯ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ನೃತ್ಯ ಕಾರ್ಯಕ್ರಮ ಆರಂಭಗೊಂಡಿದ್ದೇ ಅಂದು. 'ಕೊಡಗು ಗೌಡ ಮಹಿಳಾ ಒಕ್ಕೂಟ'ದ ವತಿಯಿಂದ ನಡೆದ ನೃತ್ಯ ಕಾರ್ಯಕ್ರಮದಿಂದ ಇದುವರೆಗೂ ಜಿಲ್ಲೆಯಲ್ಲಿ ಹಾಗೂ ಜಿಲ್ಲೆಯ ಹೊರಗಡೆ ಹಲವಾರು ಕಾರ್ಯಕ್ರಮಗಳನ್ನು ನೀಡಿ ಸೈ ಎನಿಸಿಕೊಂಡಿರುವ ಮಹಿಳಾ ಒಕ್ಕೂಟವು, ಅಂದು ಒಕ್ಕೂಟದ ಸಂಚಾಲಕಿ ಬೈತಡ್ಕ ಜಾನಕಿ ಬೆಳ್ಯಪ್ಪನವರ ವಿರಚಿತ ಗೀತೆಯೊಡನೆ ನೃತ್ಯವನ್ನು ಆರಂಭಿಸಿತು. ನೃತ್ಯ ಪ್ರೇಮಿಗಳು ತಲೆದೂಗುವಂತೆ ಕಾರ್ಯಕ್ರಮ ನೀಡಿದಾಗ ಗೌಡ ಧ್ವನಿ ಮಡಿಕೇರಿಯ ಬೆಟ್ಟ ಸಾಲುಗಳಲ್ಲಿ ಮಾರ್ದನಿಸಿತು. ಕೋಲಾಟ, ಮೂಡಲ್ ಕುಣಿಗಲ್ ಕೆರೆ ತಿಂಗಳು ಮುಳುಗಿದ್ದವೋ, ನಮ್ಮದ್ ನಮ್ಮದ್ ಅರೆಗನ್ನಡ ಭಾಷೆ ನಮ್ಮದ್ ಎಂಬ ಜಾನಪದ ನೃತ್ಯಗಳು ತೆರೆ ಕಂಡವು.

ಅಂದು ನಡೆದ ನೃತ್ಯ ಕಾರ್ಯಕ್ರಮದಲ್ಲಿ ಕೊಳುಮುಡಿಯನ ನೂತನ ತಂಡದ ಪಾರೆಮಜಲು ಜ್ಯೋತಿ, ಪಟ್ಟಡ ಪಾವನ, ಪಾರೆಮಜಲು ಸ್ವಾತಿ ಬಾರಿಕೆ ಟ್ರೆಸಿಲಾ, ಬಾಕಿಲನ ಜಸ್ಮಿ, ಪಟ್ಟಡ ನೇತ್ರ, ಪರ್ಲಕೋಟಿ ಕಾತ್ಯಾಯಿನಿ, ಮಂಞಂಡ್ರ ಮಿಲನ್, ಕಟ್ಟೆಮನೆ ಹರಿಣಿ ಅಲ್ಲದೆ ಮೇಡತನ ಮೋನಿಕಾ ಇನ್ನು ಹಲವಾರು ಗೌಡ ಯುವತಿಯರು ಪಾಲ್ಗೊಂಡು ತಮ್ಮ ಕಲಾಗಾರಿಕೆ ಮೆರೆದರು. ಬೈತಡ್ಕ ಜಾನಕಿ ಬೆಳ್ಯಪ್ಪ, ಮಂಞಂಡ್ರ ರೇಖಾ ಉಲ್ಲಾಸ್,ಕುಟ್ಟನ ಲತಾ ಸುರೇಶ್ ಇವರು ನೃತ್ಯಕ್ಕೆ ಹಿನ್ನಲೆ ಗಾಯನ ಒದಗಿಸಿದರೆ ಪುದಿಯ ನೆರವನ ರೇವತಿಯವರು ಕಾರ್ಯಕ್ರಮ ನಿರೂಪಿಸಿದರು.

ವರದಿ: ಕೊಡಗು ಸಂಗಾತಿ.

## ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯಿಂದ ಸಾಂಪ್ರದಾಯಿಕ ಕೈಲ್‌ಮುಹೂರ್ತ ಆಚರಣೆ.

ಕೊಡಗು ಗೌಡ ಜನಾಂಗದ ಸಂಸ್ಕೃತಿ, ಸಂಪ್ರದಾಯಗಳನ್ನು ಸಂರಕ್ಷಿಸುವ ಉದ್ದೇಶದಿಂದ ಅಸ್ಥಿತ್ವಕ್ಕೆ ಬಂದಿರುವ ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ ಅಕ್ಟೋಬರ್ 6 ರಂದು ಮಡಿಕೇರಿಯ ಗೌಡ ಸಮಾಜದಲ್ಲಿ ಸಾಂಪ್ರದಾಯಿಕ ಕೈಲ್ ಮುಹೂರ್ತ ಹಬ್ಬವನ್ನು ಜನಾಂಗ ಬಂಧುಗಳಿಗಾಗಿ ಹಮ್ಮಿಕೊಂಡು ಆಚರಿಸಿತು. ಸಮಾರಂಭ ದಲ್ಲಿ ಮಕ್ಕಳು ಹಿರಿಯರು ಎಂಬ ಭೇದವಿಲ್ಲದೆ ಭಾಗವಹಿಸಿದ್ದ ನೂರಾರು ಜನರು ಹಾಸ್ಯ ಮಿಶ್ರಿತ ಕ್ರೀಡಾಸ್ಪರ್ಧೆಗಳಲ್ಲಿ ಭಾಗವಹಿಸಿ ಕೈಲ್‌ಮುಹೂರ್ತ ಸಂತೋಷಕೂಟವನ್ನು ಅರ್ಥಪೂರ್ಣವಾಗಿ ಆಚರಿಸಿ ಕೊಂಡರು.

ಬೆಳಿಗ್ಗೆ 11 ಗಂಟೆಗೆ ಆರಂಭಗೊಂಡ ಕಾರ್ಯಕ್ರಮವನ್ನೂ ಜನಾಂಗದ ಹಿರಿಯರಲ್ಲೊಬ್ಬರಾದ ಕೂಡಕಂಡಿ ಅಪ್ಪಾಜಿಯವರು ಉದ್ಘಾಟಿಸಿದರು. ನಂತರ ಮಕ್ಕಳಿಗೆ ಗೋಲಿ ಹೆಕ್ಕುವುದು, ವಿದ್ಯಾರ್ಥಿಗಳಿಗೆ ವಾಕ್ಯರಚನೆ ಮಾಡುವುದು, ಕಾಲು ಪಾದದ ಮೇಲೆ ಗೋಲಿಯಿಟ್ಟು ನಡೆಯುವುದು, ಸ್ಪರ್ಶಜ್ಞಾನ ಪ್ರದರ್ಶನ, ಬೊಟ್ಟು ಅಂಟಿಸುವುದು, ಮಹಿಳೆಯರಿಗೆ ಅಂಗೈ ಮೇಲೆ ನೀರು ತುಂಬಿ ಲೋಟವನ್ನು ಇಟ್ಟು ಓಡುವುದು, ನಿರ್ದೇಶಕರಿಗೆ ನೀರಿನ ಪಾತ್ರೆಯೊಳಗಿರುವ ಗೋಲಿಯನ್ನು ಬಾಯಿಂದ ಎತ್ತಿಕೊಂಡು ಓಡುವುದು ಮುಂತಾದ ಆಕರ್ಷಕ ಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು. ಮಧ್ಯಾಹ್ನ ಕೈಲ್ ಮುಹೂರ್ತದ ಸಾಂಪ್ರದಾಯಿಕ ಊಟದ ಬಳಿಕ ಮಹನೀಯರಿಗೆ, ಮಹಿಳೆಯರಿಗೆ, ಯುವಕರಿಗೆ, ಯುವತಿಯರಿಗೆ ಪ್ರತ್ಯೇಕವಾಗಿ ಏರ್ಪಡಿಸಿದ್ದ ಸಾಂಪ್ರದಾಯಿಕ ಓಲಗ ಕುಣಿತದ ಸ್ಪರ್ಧೆ ಎಲ್ಲರ ಮನ ರಂಜಿಸಿತು. ಮಞಂಡ್ರ ರೇಖಾ ಉಲ್ಲಾಸ್ ಸ್ಪರ್ಧಾ ಕಾರ್ಯಕ್ರಮ ಆಯೋಜಿಸಿದ್ದರು.

ನಂತರ ನಡೆದ ಸಭಾ ಕಾರ್ಯಕ್ರಮದಲ್ಲಿ ರಾಷ್ಟ್ರ ಪ್ರಶಸ್ತಿ ಪಡೆದ ಶಿಕ್ಷಕಿ ತೆಕ್ಕಡೆ ಜಯಶೀಲಾ ಮುತ್ತಣ್ಣನವರನ್ನು ಸನ್ಮಾನಿಸಲಾಯಿತು. ದಾನಿಗಳಾದ ಯಾಲದಾಳು ಸೋಮಯ್ಯ, ಕೆಚಪ್ಪನ ಪ್ರಮಿಳಾ ಮೋಹನ್‌ರವರು ಅತಿಥಿಗಳಾಗಿ ವೇದಿಕೆಯಲ್ಲಿ ಉಪಸ್ಥಿತರಿದ್ದು ಬಹುಮಾನ ವಿತರಿಸಿದರು. ಸಭಾಧ್ಯಕ್ಷತೆಯನ್ನು ವಹಿಸಿದ್ದ ತುಂತಜೆ ಗಣೇಶರವರು ಸ್ವಾಗತಿಸಿದರು. ಪಟ್ಟಡ ಶಿವಕುಮಾರ್ ಸನ್ಮಾನಿತರ ಪರಿಚಯ ಮಂಡಿಸಿದರು. ಕಟ್ಟೆಮನೆ ಸೋನಾರವರು ಕ್ರೀಡೆಯ ವೀಕ್ಷಕ ವಿವರಣೆ ನೀಡಿದರು. ಕೊಂಪುಳಿರ ಗಣೇಶರವರು ಕಾರ್ಯಕ್ರಮ ನಿರೂಪಿಸಿದರೆ, ಕೊನೆಯಲ್ಲಿ ಪಟ್ಟಡ ಶಿವಕುಮಾರ್ ಸರ್ವರನ್ನೂ ವಂದಿಸಿದರು.

ಇದೇ ಸಂದರ್ಭದಲ್ಲಿ ಮೇ 23-24 ರಂದು ಗೌಡ ಮಹಿಳಾ ಒಕ್ಕೂಟದಿಂದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಕಲಾಮಂದಿರ ಮಂಡ್ಯದ ಕಾವೇರಿ ಉತ್ಸವದಲ್ಲಿ ಭಾಗವಹಿಸಿದ ಯುವತಿಯರಿಗೂ ಮಹಿಳೆಯರಿಗೂ ನೆನಪಿನ ಕಾಣಿಕೆ ಪ್ರಶಸ್ತಿ ಪತ್ರ ಹಾಗೂ ಸ್ನೇಹಸೇತು ಎಂಬ ಸ್ಮರಣ ಸಂಚಿಕೆಯನ್ನು 17 ಮಂದಿಗೆ ವಿತರಿಸಲಾಯಿತು.

ವರದಿ: ಪಟ್ಟಡ ಶಿವಕುಮಾರ್.

# ಬೆಂಗಳೂರಿನ ಗೌಡ ಬಾಂಧವರಿಗೆ ದಾರಿ ದೀಪವಾಗಿರುವ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ

ಬೆಂಗಳೂರಿನ ಕೊ. ಮತ್ತು ದ. ಕ ಸಮಾಜ 1960 ರ ದಶಕದಲ್ಲಿ ಹಿರಿಯರ ದೂರದೃಷ್ಟಿ ಹಾಗೂ ಕಿರಿಯರ ಅದಮ್ಯ ಸ್ಫೂರ್ತಿ ಪ್ರೀತಿಯೊಂದಿಗೆ ಉದ್ಯೋಗವಕಾಶವನ್ನು ಹುಡುಕಿಕೊಂಡು ಬಂದ ನಮ್ಮ ಬಾಂಧವರ ಸತತ ಪ್ರಯತ್ನದಿಂದ ಹುಟ್ಟಿಕೊಂಡಿತೆಂದರೆ ಅತಿಶಯೋಕ್ತಿಯಲ್ಲ. 60 ರ ದಶಕದಲ್ಲಿ ಕೇವಲ ಕೆಲವೇ ಸದಸ್ಯರೊಂದಿಗೆ ಪ್ರಾರಂಭವಾದ ಈ ಸಂಘ ಇಂದು ಹೆಮ್ಮರದಂತೆ ಬೃಹದಾಕಾರವಾಗಿ ಬೆಳೆದು ನಿಂತಿದೆ. ಇಂದು ಈ ಸಂಘ ಸುಮಾರು ಸಾವಿರಕ್ಕೂ ಹೆಚ್ಚು ಮಂದಿ ಸದಸ್ಯರನ್ನು ಹೊಂದಿದೆಯಲ್ಲದೆ ತನ್ನದೆ ಆದ ನೆಲೆಯನ್ನು ಕಟ್ಟಿಕೊಂಡು ತಿಂಗಳಿಗೆ ಸುಮಾರು 30,000-00 ವರಮಾನವನ್ನು ಬಾಡಿಗೆ ರೂಪದಲ್ಲಿ ಪಡೆಯುತ್ತಿದೆ ಎಂದು ಹೇಳಲು ನನಗೆ ಹರ್ಷವಾಗುತ್ತದೆ. ಇದಲ್ಲದೆ ಈ ಸಮಾಜವು ಇತ್ತೀಚೆಗೆ ಬೆಂಗಳೂರಿನಲ್ಲಿಯೇ ಸುಮಾರು 17 ಲಕ್ಷ ಮೌಲ್ಯದ ಹೊಸ ನಿವೇಶನವನ್ನು ಕೊಂಡು ಕೊಂಡು ನಮ್ಮ ಗೌಡ ಬಾಂಧವರಿಗೆ ಉಪಯೋಗವಾಗುವಂತೆ ಕಲ್ಯಾಣ ಮಂಟಪವನ್ನು ಕಟ್ಟುವ ಮಹದಾಕಾಂಕ್ಷೆಯನ್ನು ಹೊಂದಿದೆ. ಈ ಸಮಾಜವು ಪ್ರತಿ ವರ್ಷ ಹತ್ತು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ನಮ್ಮ ಗೌಡ ಜನಾಂಗವನ್ನು ಒಂದು ವೇದಿಕೆಗೆ ತರುವಲ್ಲಿ ಸತತ ಪ್ರಯತ್ನವನ್ನು ಮಾಡುತ್ತಿದೆ. ಹಾಗೂ ಇದರಲ್ಲಿ ಅಪಾರ ಯಶಸ್ಸನ್ನು ಕೂಡ ಗಳಿಸಿದೆ ಎಂದರೆ ಅತಿಶಯೋಕ್ತಿಯಲ್ಲ. ಈ ಸಮಾಜದ 2002-03 ರ ಕಾರ್ಯ ಚಟುವಟಿಕೆಗಳ ಒಂದು ಪಕ್ಷಿ ನೋಟವನ್ನು ನಿಮ್ಮೆಲ್ಲರ ಹೆಮ್ಮೆಯ ಪತ್ರಿಕೆ ಕೊಡಗು ಸಂಗಾತಿಯ ಮೂಲಕ ಕೊಡಲು ನಾವು ಬಯಸುತ್ತೇವೆ.

ಮೊದಲ ಚಟುವಟಿಕೆ ವಾರ್ಷಿಕ ಕ್ರೀಡಾಕೂಟ ಮತ್ತು ಪಂದ್ಯಾಟಗಳ ಮೂಲಕ ತಾರೀಖು 1-9-2002 ರಂದು ಬಿ. ಇ. ಎಲ್. ಅಂಬೇಡ್ಕರ್ ಕ್ರೀಡಾಂಗಣ ಜಾಲಹಳ್ಳಿ, ಇಲ್ಲಿ ಪ್ರಾರಂಭವಾಯಿತು. ಈ ಕ್ರೀಡಾಕೂಟವನ್ನು ಉದ್ಘಾಟಿಸಿದವರು ನಮ್ಮವರೇ ಆದ ಕನ್ನಡ್ಕ ಅಜಿತ್‌ಕುಮಾರ್ (400 ಮಿ ಮತ್ತು 100 ಮೀ ನಲ್ಲಿ ರಾಷ್ಟ್ರ ಮಟ್ಟದಲ್ಲಿ ಪ್ರಶಸ್ತಿಯನ್ನು ಪಡೆದವರು) ಹಾಗೂ ಕಾಳೇರಮ್ಮನ ರಾಯ್ ಪಾಲಾಕ್ಷ (ಜೂನಿಯರ್ ಅಂತರಾಷ್ಟ್ರೀಯ ಹಾಕಿ ಪಟು). ಉರಿಯುವ ಸುಡು ಬಿಸಿಲಿನಲ್ಲಿಯೂ, ಕ್ರೀಡಾ ಪಟುಗಳು ಹುಮ್ಮಸ್ಸಿನಿಂದ ಭಾಗವಹಿಸುತ್ತಿದ್ದುದ್ದು ಹಬ್ಬದ ವಾತಾವರಣವೇ ಸೃಷ್ಟಿ ಮಾಡಿತ್ತು. ಕ್ರೀಡೆಗಳು 3 ವರ್ಷದ ಹಸುಳೆಯರಿಂದ 70 ವರ್ಷದ ವಯೋವೃದ್ಧರವರೆಗೂ ಸ್ಪರ್ಧೆಗಳು ಇದ್ದುದ್ದು ಒಂದು ವಿಶೇಷ. ಸಾಂಪ್ರದಾಯಿಕ ಕ್ರೀಡೆಗಳಾದ ಏರ್‌ಗನ್ ಸೂಟಿಂಗ್, ಕಾಯಿಗೆ ಕಲ್ಲು ಹೊಡೆಯುವುದು, ನಿಂಬೆಹಣ್ಣು ಮತ್ತು ಚಮಚದ ನಡಿಗೆ, ಸಂಗೀತ ಕುರ್ಚಿ ಇವುಗಳಿಗೆ ಹೆಚ್ಚಿನ ಒತ್ತು ಕೊಡಲಾಗಿತ್ತು. ಅಂತೂ ನಮ್ಮ ಬಾಂಧವರು ಬೆಂಗಳೂರಿನ ಯಾಂತ್ರಿಕ ಜೀವನದಿಂದ ಹೊರಬರಲು ಈ ಸಮಾಜವು ಒಂದು ಸುವರ್ಣ ಅವಕಾಶವನ್ನೇ ಮಾಡಿಕೊಟ್ಟಿದೆ ಎಂದರೆ ತಪ್ಪಾಗಲಾರದು.

ಈ ಸಮಾಜ ಬರಿ ಕ್ರೀಡೆಗಳಿಗೆ ಮಾತ್ರ ಪ್ರಾಮುಖ್ಯತೆ ಕೊಟ್ಟಿಲ್ಲ. ಸಾಂಸ್ಕೃತಿಕ ಕ್ಷೇತ್ರದಲ್ಲೂ ನಮ್ಮ ಜನಾಂಗದ ಯುವ ಪ್ರತಿಭೆಯನ್ನು ಹೊರತರುವಲ್ಲಿ 1995 ರಿಂದಲೂ ಅವಿರತವಾಗಿ ದುಡಿಯುತ್ತಿದೆ. ಅದೇ ರೀತಿಯಲ್ಲಿ ಈ ಬಾರಿಯೂ ಸಾಂಸ್ಕೃತಿಕ ಸ್ಪರ್ಧೆಗಳನ್ನು ತಾರೀಖು 8-9-02 ರಂದು ಪ್ರತಿಷ್ಠಿತ ಯುವನಿಕ ಸಭಾಂಗಣದಲ್ಲಿ ಹಮ್ಮಿಕೊಂಡಿತು. ಸುಮಾರು 800 ಜನ ಗೌಡ ಬಾಂಧವರು ಈ ಸ್ಪರ್ಧೆಗಳಲ್ಲಿ ಅಂದರೆ ಸ್ಥಳದಲ್ಲಿ ಚಿತ್ರ ಬರೆಯುವುದು ಛದ್ಮ ವೇಶ, ಏಕಪಾತ್ರಾಭಿನಯ, ಯಕ್ಷಗಾನ, ಭೂತಕೋಲ, ಶೋಭಾನೆ, ಭಾವಗೀತೆ, ಚಿತ್ರಗೀತೆ, ಭಕ್ತಿಗೀತೆ, ಜಾನಪದಗೀತೆ, ನಾಟಕ, ಭಾರತೀಯ ಮತ್ತು ಪಾಶ್ಚಿಮಾತ್ಯ ನೃತ್ಯಗಳು ಹಾಗೂ ರಸ ಪ್ರಶ್ನೆಯಲ್ಲಿ ಅತೀ ಉತ್ಸಾಹದಿಂದ ರಾತ್ರಿ 9 ಗಂಟೆಯವರೆಗೂ ಭಾಗವಹಿಸುತ್ತಿದ್ದುದು ನೋಡಲು ನಯನ ಮನೋಹರವಾಗಿತ್ತು. ಈ ಸಮಾಜದ ಅಂತಿಮ ಹಾಗೂ ಬಹಳ ಪ್ರಮುಖವಾದ ಕಾರ್ಯಕ್ರಮವೆಂದರೆ ತಾರೀಖು 22-9-02 ರಂದು ಹೊಸದಾಗಿ ಕೊಂಡು ಕೊಂಡ ಗೃಹಲಕ್ಷ್ಮಿ ಬಡಾವಣೆ, ನೆಲಗದರನಹಳ್ಳಿ ಪೀಣ್ಯದಲ್ಲಿ ನಡೆದ ವಾರ್ಷಿಕ ಮಹಾಸಭೆ ಮತ್ತು ಕೈಲ್ ಮುಹೂರ್ತ ಹಬ್ಬದ ಸಮಾರಂಭ. ಈ ನಿವೇಶನ ಬೆಂಗಳೂರಿನ ಕೆಂಪೇಗೌಡ ಬಸ್ ನಿಲ್ದಾಣದಿಂದ 12 ಕಿ.ಮೀ. ದೂರದಲ್ಲಿದ್ದು ರಮ್ಯವಾದ ತಾಣದಲ್ಲಿದೆ.

ವಾರ್ಷಿಕ ಮಹಾಸಭೆಯನ್ನು ಬೆಳಿಗ್ಗೆ 9-30 ರಿಂದ 10-30 ರ ಅವಧಿಯಲ್ಲಿ ಸಮಾಜದ ಅಧ್ಯಕ್ಷರಾದ ದಂಬೇಕೋಡಿ ಆನಂದರವರ ಅಧ್ಯಕ್ಷತೆಯಲ್ಲಿ ಸಮರ್ಪಕವಾಗಿ ನಡೆಸಿ ಕೊಡಲಾಯಿತು. ಇದರಲ್ಲಿ ಮಹಿಳಾ ಸಮಾಜದ ಅಧ್ಯಕ್ಷೆರಾದ ಕುಯ್ಯುಮುಡಿ ಸುಶೀಲಾ ಅವರು ಮಹಿಳಾ ಸಮಾಜದ ಪ್ರಾಮುಖ್ಯತೆಯನ್ನು ವಿವರಿಸಿ ಹೇಳಿದರಲ್ಲದೆ ಮಹಿಳೆಯರಿಗಾಗಿ ಹಮ್ಮಿಕೊಂಡು ಕಾರ್ಯಕ್ರಮದ ವಿವರಣೆ ನೀಡಿದರು. ಕೈಲ್ ಮುಹೂರ್ತ ಹಬ್ಬದ ಸಮಾರಂಭಕ್ಕೆ ಗಣ್ಯ ವ್ಯಕ್ತಿಗಳ ಸಂಗಮವೇ ಆಗಿದ್ದು ವೇದಿಕೆಗೆ ಧನ್ಯತೆಯನ್ನು ತಂದಿತ್ತು.

ಈ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದವರು ನಮಗೆಲ್ಲರಿಗೂ ಚಿರಪರಿಚಿತರಾದ ವಿದ್ಯಾ ಕ್ಷೇತ್ರದ ಭೀಷ್ಮರೆಂದೇ ಪ್ರಸಿದ್ಧಿಯಾಗಿರುವ ಅಕಾಡೆಮಿ ಆಫ್ ಲಿಬರಲ್ ಎಜುಕೇಶನ್ ಅಧ್ಯಕ್ಷರಾದ ಶ್ರೀಮಾನ್ ಕುರುಂಜಿ ವೆಂಕಟರಮಣಗೌಡರು.

ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಗಣ್ಯರೆಂದರೆ ಒಕ್ಕಲಿಗರ ಸಂಘದ ಹಾಲಿ ಅಧ್ಯಕ್ಷ ಶ್ರೀಮಾನ್ ಡಿ. ಬಿ. ಬಸವೇಗೌಡರು, ಕು. ವೆಂ. ಪು. ವಿಶ್ವ ವಿದ್ಯಾನಿಲಯದ ಉಪಕುಲಪತಿ ಡಾ|| ಕೊಳಂಬೆ ಚಿದಾನಂದಗೌಡರು ಹಾಗೂ ಹೆಸರುವಾಸಿ ಪೊಲೀಸ್ ಅಫೀಸರ್‌ಬೈತಡ್ಕ ಜೋಯಪ್ಪನವರು. ಈ ಸಮಾರಂಭವು ಸರಿಯಾಗಿ ಪೂರ್ವಾಹ್ನ 10-30ಗಂಟೆಗೆ ಕಾನೆಹಿತ್ಲು ಚೇತನ್ ಕಾಳಪ್ಪನವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಅನಂತರ, ನೆರೆದಿದ್ದ ಬಾಂಧವರನ್ನು ಹಾಗೂ ಮುಖ್ಯ ಅತಿಥಿಗಳನ್ನು ಸ್ವಾಗತಿಸಿ, ಪ್ರಾಸ್ತಾವಿಕ ಭಾಷಣ ಮಾಡಿದವರು ಸಮಾಜದ ಅಧ್ಯಕ್ಷರು ಹಾಗೂ ಹಿರಿಯ ಚೇತನ ಸ್ಫೂರ್ತಿಯ ಚಿಲುಮೆ ಕೆ. ಎಸ್. ಎಫ್. ಸಿ. ಜನರಲ್ ಮ್ಯಾನೇಜರ್ ದಂಬೇಕೋಡಿ ಆನಂದರವರು. ಅನಂತರ ಕಾರ್ಯದರ್ಶಿ ಹಾಗೂ ಸಮಾರಂಭದ ನಿರೂಪಕ ಶ್ರೀ ನಂಗಾರು ನಿಂಗರಾಜು ರವರು. ಶ್ರೀ ಅನಂತರಾಜಗೌಡರು ಮತ್ತು ಮೂಲೆಮಜಲು ಚಿನ್ನಪ್ಪನವರು ಮುಖ್ಯ ಅತಿಥಿಗಳನ್ನು ಹಾಗೂ ಅಧ್ಯಕ್ಷರನ್ನು ಸಭೆಗೆ ಪರಿಚಯಿಸಿದರು ಹಾಗೂ ಅವರೆಲ್ಲರನ್ನು ತುಂಬಿದ ಸಭೆಯಲ್ಲಿ ಸನ್ಮಾನಿಸಲಾಯಿತು.

---

ನಿಮ್ಮ ನಿಮ್ಮ ವ್ಯವಹಾರಗಳಿಂದ ನೀವು ಮಿತ್ರರಾಗಲೀ, ಶತ್ರುಗಳಾಗಲಿ ಆಗುತ್ತೀರಿ.

ಇದಲ್ಲದೆ ಪ್ರಶಸ್ತಿ ವಿಜೇತರಿಗೆ ಹಾಗೂ ಗಣ್ಯರಿಗೆ ಸನ್ಮಾನ ಕಾರ್ಯಕ್ರಮದಲ್ಲಿ ಸನ್ಮಾನಿತರೆಂದರೆ ರಾಷ್ಟ್ರ ಪ್ರಶಸ್ತಿಯನ್ನು ಪಡೆದ ಕೊಡಗಿನ ಪ್ರೌಢಶಾಲ ಶಿಕ್ಷಕಿ ತೆಕ್ಕಡೆ ಜಯಶೀಲಾ, ಸಾರ್ವಜನಿಕ ಸಂಪರ್ಕ ವಿಭಾಗದಲ್ಲಿ ಹೆಸರು ವಾಸಿಯಾದ Chief Manager Corporate Communication ಹಾಗೂ ನಮ್ಮ Hightech ಮುಖ್ಯ ಮಂತ್ರಿಯವರ Adviser Communication ಶ್ರೀ ಮೋಂಟಡ್ಕ ಬಾಲಕೃಷ್ಣ ಜಯರಾಂನವರು.

ರೆವಿನ್ಯೂ ಇಲಾಖೆಯಲ್ಲಿ ದಕ್ಷ ಆಡಳಿತಗಾರರು ಎಂದು ಹೆಸರನ್ನು ಪಡೆದು ಈಗ ಮುಖ್ಯಮಂತ್ರಿಯವರ ವಿಶೇಷಾಧಿಕಾರಿಯಾಗಿರುವ ಡಾ. ಕರ್ಣಯ್ಯನ ಅಪ್ಪಯ್ಯ ಕೆ.ಎ. ಎಸ್. ಅಧಿಕಾರಿ. ಹಾಗೂ ಕೈಗಾರಿಕಾ ಕ್ಷೇತ್ರದಲ್ಲಿ ಹತ್ತು ಹಲವಾರು ಆವಿಷ್ಕಾರಗಳನ್ನು ಮಾಡಿ ಇಂದಿರಾಗಾಂಧಿ ಸ್ಮಾರಕ ಪ್ರಶಸ್ತಿ ಹಾಗೂ ಪ್ರಧಾನ ಮಂತ್ರಿಯವರ "ಶ್ರಮಭೂಷಣ" ಪ್ರಶಸ್ತಿಯನ್ನು ಪಡೆದ ನಂಗಾರು ಪಿ. ಮೋನಪ್ಪನವರು. ಜಿಲ್ಲಾನ್ಯಾಯಾಧೀಶರಾಗಿ ಆಯ್ಕೆಯಾಗಿರುವ ಯುವಕ ಕೇವಲ ಶಿನರಾಂಗೌಡರು. ರಾಷ್ಟ್ರದ ರಕ್ಷಣ ವಿಭಾಗದಲ್ಲಿ ಲೆಫ್ಟಿನೆಂಟ್ ಆಗಿ ಆಯ್ಕೆಯಾಗಿರುವ ಮೊಟ್ಟಮೊದಲ ಕೊಡಗಿನ ಗೌಡ ಮಹಿಳೆ ಕುಯ್ಯುಮುಡಿ ಪೂಜಾ ವಸಂತ ಹಾಗೂ, ಸಮಾಜಕ್ಕೆ ನಿವೇಶನವನ್ನು ನೀಡಿದ ಶ್ರೀಮಾನ್ ಹೆಚ್. ಡಿ. ಸಿದ್ದಗಂಗಯ್ಯನವರು.

ಇದಲ್ಲದೆ ಎಸ್‌ಎಸ್‌ಎಲ್‌ಸಿ, ಪಿಯುಸಿ ಇನ್ನಿತರ ತರಗತಿಗಳಲ್ಲಿ ಅತಿ ಹೆಚ್ಚು ಅಂಕಗಳನ್ನು ಗಳಿಸಿದ ವಿದ್ಯಾರ್ಥಿಗಳಿಗೆ ನಗದು ಬಹುಮಾನ ಹಾಗೂ ಪ್ರಶಸ್ತಿಯನ್ನು ಮುಖ್ಯ ಅತಿಥಿಗಳು ಕೊಟ್ಟು ಸನ್ಮಾನಿಸಿದರು. ಎಸ್‌ಎಸ್‌ಎಲ್‌ಸಿ ಮತ್ತು ಪಿಯುಸಿಯಲ್ಲಿ ಅತಿ ಹೆಚ್ಚು ಅಂಕಗಳಿಸಿದ ಪ್ರಥಮರಿಗೆ ರೂ. 1500-00 2ನೇ ಬಹುಮಾನ ಗಳಿಸಿದವರಿಗೆ ರೂ 1000-00 3ನೇ ಬಹುಮಾನ ಗಳಿಸಿದವರೆಗೆ ರೂ. 750-00 ಕೊಟ್ಟು ಸನ್ಮಾನಿಸಲಾಯಿತು. ಇವರನ್ನು ಪರಿಚಯಿಸಿದವರು ಶ್ರೀಮತಿ ವೈಶಾಲಿ ಅಮರ್‌ನಾಥ್ ಹಾಗೂ ಮೂಲೆ ಮಜಲು ಯಶೋದಮ್ಮನವರು.

ಈ ಸಮಾರಂಭದಲ್ಲಿ ಸುಮಾರು 2000 ಕ್ಕಿಂತಲೂ ಹೆಚ್ಚು ಜನ ಸೇರಿದ್ದು, ಸಮಾರಂಭದ ಮುಖ್ಯ ಆಕರ್ಷಣೆಯೆಂದರೆ ಮುಖ್ಯ ಅತಿಥಿಗಳ ಭಾಷಣ ಪ್ರಥಮವಾಗಿ ಮಾತನಾಡಿದ ಹಾಲಿ ಒಕ್ಕಲಿಗರ ಸಂಘದ ಅಧ್ಯಕ್ಷರಾದ ಶ್ರೀಮಾನ್ ಡಿ. ಬಿ. ಬಸವೇಗೌಡರು ತಮ್ಮ ಕೊಡಗಿನ ಸಂಬಂಧವನ್ನು ವಿವರಿಸಿ ಹೇಳಿದರಲ್ಲದೆ ಈ ಸಮಾಜವು ಮಾಡುವ ಘನ ಕಾರ್ಯಗಳ ಬಗ್ಗೆ ತುಂಬು ಹೃದಯದಿಂದ ಪದಾಧಿಕಾರಿಗಳನ್ನು ಅಧ್ಯಕ್ಷರನ್ನು ಅಭಿನಂದಿಸಿದರು.

ಇನ್ನೊಬ್ಬ ಮುಖ್ಯ ಅತಿಥಿ ನಮ್ಮ ಜನಾಂಗದ ಮೊದಲ ಉಪಕುಲಪತಿಯೆಂಬ ಹೆಗ್ಗಳಿಕೆಗೆ ಪಾತ್ರವಾಗಿರುವ ಢಾ॥ ಕೊಳಂಬೆ ಚಿದಾನಂದ ಗೌಡರು ಮಾತನಾಡುತ್ತ ಬೆಂಗಳೂರಿನಲ್ಲಿ ನಡೆದ ಈ ಸಮಾರಂಭದಲ್ಲಿ ಭಾಗವಹಿಸಲು ನನಗೆ ಬಹಳ ಸಂತೋಷವಾಗಿದೆ. ಗೌಡ ಜನಾಂಗದವರನ್ನು ಒಂದು ವೇದಿಕೆಗೆ ತಂದ ಈ ಸಮಾಜವನ್ನು ಅಭಿನಂದಿಸಿದರು.

ಡಾ॥ಎಂ. ಎಲ್. ಬೋಜಮ್ಮ Consultant Physician City ಆಸ್ಪತ್ರೆ ಬೆಂಗಳೂರು ಇವರ ಅನುಪಸ್ಥಿತಿಯಲ್ಲಿ ಮುಖ್ಯ ಅತಿಥಿಯಾಗಿ ಬಂದ ಅವರ ಪತಿ ಎ. ಸಿ. ಪಿ. ಬೈತಡ್ಕ ಜೋಯಪ್ಪನವರು ತಾವು ನಡೆದು ಬಂದ ಜೀವನದ ಮುಖ್ಯ ಘಟನೆಗಳನ್ನು ವಿವರಿಸಿದರಲ್ಲದೆ, ನಮ್ಮ ಯುವ ಜನಾಂಗದವರು ಸ್ಪರ್ಧಾತ್ಮಕ ಪರೀಕ್ಷೆಗಳನ್ನು ತೆಗೆದುಕೊಂಡು ಐ.ಎ. ಎಸ್. ಮತ್ತು ಐ. ಪಿ. ಎಸ್. ಹುದ್ದೆಗಳನ್ನು ಅಲಂಕರಿಸಬೇಕೆಂದು ಯುವ ಜನರಿಗೆ ಕಳ ಕಳಿಯ ಮನವಿಯನ್ನು ಮಾಡಿದರು.

ಅಧ್ಯಕ್ಷ ಭಾಷಣವನ್ನು ಮಾಡಿದ ನಮ್ಮ ಸಮಾಜದ ಮೇರು ವ್ಯಕ್ತಿ ಕುರುಂಜಿ ವೆಂಕಟರಮಣಗೌಡರು ವಿದ್ಯೆಯ ಪ್ರಾಮುಖ್ಯತೆಯನ್ನು ತಿಳಿಸುತ್ತಾ ಕೊಡಗು ಮತ್ತು ದ. ಕ. ಜಿಲ್ಲೆಯಲ್ಲಿ ಯಾರು ವಿಜ್ಞಾನ ವಿಭಾಗ ಅಂದರೆ ಪಿ. ಸಿ. ಎಂ. ಇ. ಕೋರ್ಸ್‌ಗಳನ್ನು ಪ್ರಾರಂಭ ಮಾಡುತ್ತಾರೋ ಅಂತಹವರಿಗೆ 2.00 ಲಕ್ಷ ರೂಪಾಯಿಗಳ ದೇಣಿಗೆ ನೀಡುವುದಾಗಿ ಘೋಷಿಸಿದರು.

ವೇದಿಕೆಯ ಮೇಲೆ ಉಪಸ್ಥಿತರಿದ್ದ ಇನ್ನಿತರ ವ್ಯಕ್ತಿಗಳೆಂದರೆ ಡಾ॥ ಚಿದಾನಂದ ಗೌಡರ ಧರ್ಮಪತ್ನಿ ಹಾಗೂ ರಾಷ್ಟ್ರ ಕವಿ ಕುವೆಂಪುರವರ ಸುಪುತ್ರಿ ಶ್ರೀಮತಿ ತಾರಿಣಿಯವರು.

ಡಿಸ್ಟ್ರಿಕ್ಟ್ ಜಿಲ್ಲಾ ನ್ಯಾಯಧೀಶರಾಗಿರುವ ಶ್ರೀಮಾನ್ ಹರಿಯಪ್ಪಗೌಡರು ಮತ್ತು ಸಮಾರಂಭದಲ್ಲಿ ಸನ್ಮಾನಿತ ಪರವಾಗಿ ಯು. ಎಸ್. ಜಯಶೀಲಾರವರು ಮಾತನಾಡುತ್ತಾ ಗುರು ಹಾಗೂ ಮಾತಾ ಪಿತೃಗಳ ಪ್ರಾಮುಖ್ಯತೆಯನ್ನು ಒತ್ತಿ ಹೇಳಿದರು. ಶ್ರೀಮಾನ್ ಯಂ. ಬಿ. ಜಯರಾಮ್ ಹಾಗೂ ಡಾ॥ ಕರ್ಣಯ್ಯನ ಅಪ್ಪಯ್ಯನವರು ನಮ್ಮ ಗೌಡ ಜನಾಂಗದವರಲ್ಲಿ ಪರಸ್ಪರ ಸಂಪರ್ಕ ಏರ್ಪಡಿಸುವುದು ಅತ್ಯಂತ ಪ್ರಮುಖವಾದುದೆಂದು ಈ ದಿಶೆಯಲ್ಲಿ ನಮ್ಮ ಜನರು ಕಾರ್ಯಪ್ರವೃತ್ತರಾಗಬೇಕೆಂದು ಕರೆ ನೀಡಿದರು.

ಸಮಾಜದ ವತಿಯಿಂದ ಕೊಡಗಿನ ಬೋಜನವನ್ನು ಏರ್ಪಡಿಸಲಾಗಿತ್ತು. ಅನಂತರ ಮನರಂಜನಾ ಕಾರ್ಯಕ್ರಮದಲ್ಲಿ ಬೆಂಗಳೂರಿನ ಸುಪ್ರಸಿದ್ಧ 'ಗಾನ ವಿನೋದಿನಿ"ತಂಡದಿಂದ "ನಗೆ ಮಲ್ಲಿಗೆ" ಹಾಸ್ಯ ಲಹರಿ ಕಾರ್ಯಕ್ರಮ ಜನರನ್ನು ನಗೆ ಗಡಲಿನಲ್ಲಿ ತೇಲಿಸುವಂತೆ ಮಾಡಿತ್ತು.

ಕ್ರೀಡೆ ಹಾಗೂ ಸಾಂಸ್ಕೃತಿಕ ಸ್ಪರ್ಧೆಯಲ್ಲಿ ಅಂದರೆ ಸುಮಾರು 90 ವಿಭಾಗದಲ್ಲಿ ಗೆದ್ದ ಸ್ಪರ್ಧಿಗಳಿಗೆ ಬಹುಮಾನ ವಿತರಣೆಯನ್ನು ಮಾಡಲಾಯಿತು. ಖಜಾಂಚಿ ಕೇವಳ ರವೀಂದ್ರನಾಥರವರು ಕೊಡುಗೈ ದಾನಿಗಳ ಒಂದು ದೊಡ್ಡ ಪಟ್ಟಿಯನ್ನು ಸಭೆಗೆ ಓದಿ ಹೇಳಿದರು. ಸಮಾರಂಭವನ್ನು ವಿಕ್ಷಿಸಿದ ಎಲ್. ಟಿ. ಕಾರ್ಲೆ ಫ್ಯಾಕ್ಟರಿಯ ಉತ್ತಯ್ಯನವರು 10,000 ರೂಪಾಯಿ ಸಹಾಯಧನವನ್ನು ಸ್ಥಳದಲ್ಲಿಯೇ ಘೋಷಿಸಿದರು. ಸಭೆಯಲ್ಲಿ ನೆರೆದಿದ್ದ ಗೌಡ ಬಾಂದವರಿಗೆ ವಂದಿಸಿದವರು ಸಮಾಜದ ಉಪಾಧ್ಯಕ್ಷರಾದ ತಿಮ್ಮಪ್ಪಗೌಡರು. ಈ ಹೊಸ ನಿವೇಶನದಲ್ಲಿ ಭವ್ಯವಾದ ವೇದಿಕೆ ಹಾಗೂ ಸಕಲ ಸೌಲಭ್ಯಗಳ ಪ್ರಾಯೋಜಕರೆಂದರೆ ಸುಳ್ಳಕೋಡಿ ಪ್ರದೀಪ್ ಕುಮಾರ್ ಮತ್ತು ಅಮರ್‌ನಾಥ್ ಕುಟುಂಬಸ್ತರು. ಸಾಂಸ್ಕೃತಿಕ ಕಾರ್ಯಕ್ರಮದ ಪ್ರಾಯೋಜಕರು ನಂಗಾರು ಕುಟುಂಬಸ್ತರು.

ನಾನು ಸಾಮಾನ್ಯವಾಗಿ ಕೊಡಗು ಮತ್ತು ದ. ಕನ್ನಡದಲ್ಲಿರುವ ಗೌಡ ಸಮಾಜಗಳು ನಡೆಸುವ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದೇನೆ ಹಾಗೂ ವೀಕ್ಷಿಸಿದ್ದೇನೆ. ಆದರೆ ಬೆಂಗಳೂರಿನಲ್ಲಿರುವ ಕೊಡಗು ಮತ್ತು ದ. ಕನ್ನಡ ಗೌಡ ಸಮಾಜ ಮಾಡುತ್ತಿರುವ ಕೆಲಸ ಅನನ್ಯ ಮತ್ತು ಅವಿಸ್ಮರಣೀಯ ಕ್ರೀಡಾ ಹಾಗೂ ಸಾಂಸ್ಕೃತಿಕಸ್ಪರ್ಧೆ ಹಾಗೂ ಕೈಲ್ ಮುಹೂರ್ತ ಸಮಾರಂಭಗಳನ್ನು ಪ್ರತಿ ವರ್ಷವೂ ಹಮ್ಮಿಕೊಂಡು ನಮ್ಮ ಗೌಡ ಜನಾಂಗದವರನ್ನು ಒಂದು ವೇದಿಕೆಗೆ ತರಲು ಸತತವಾಗಿ ದುಡಿಯುತ್ತಿದೆ. ಇದಲ್ಲದೆ ಈ ಸಮಾಜವು ನಿರುದ್ಯೋಗಿಗಳಿಗೆ

ಉದ್ಯೋಗವನ್ನು ಒದಗಿಸಿಕೊಡಲು ಹಾಗೂ ಯುವಕ ಯುವತಿಯರು ತಮ್ಮ ಜೀವನ ಸಂಗಾತಿಯನ್ನು ಹುಡುಕಿಕೊಳ್ಳಲು Employment Burea ಹಾಗೂ Marriage Bureau ಗಳನ್ನು ತೆರೆದಿದ್ದು ಈ ವಿಭಾಗದಲ್ಲೂ ಅಪಾರ ಯಶಸ್ಸು ಗಳಿಸಿದೆ. ನಮ್ಮ ಎಲ್ಲಾ ಗೌಡ ಸಮಾಜಗಳು ಈ ಮಾದರಿಯಲ್ಲಿ ಕಾರ್ಯ ಪ್ರವೃತ್ತಿರಾದರೆ ನಮ್ಮ ಗೌಡ ಜನಾಂಗಕ್ಕೆ ಈ ಸಮಾಜಗಳು ದಾರಿ ದೀಪವಾಗುವಲ್ಲಿ ಯಾವ ಸಂಶಯವೂ ಇಲ್ಲ. ಸಮಾಜದ ಅಧ್ಯಕ್ಷರಾದ ಶ್ರೀಮಾನ್ ದಂಬೇಕೋಡಿ ಆನಂದನವರು ಉಪಾಧ್ಯಕ್ಷರಾದ ತಿಮ್ಮಪ್ಪಗೌಡರು ಕಾರ್ಯದರ್ಶಿಗಳಾದ ನಂಗಾರು ನಿಂಗರಾಜುರವರು ಖಜಾಂಚಿಗಳಾದ ಕೇವಳ ರವೀಂದ್ರನಾಥರವರು ಹಾಗೂ ಸದಸ್ಯರುಗಳಾದ ಶ್ರೀ ಕುರಿಯ ಚಾಮಯ್ಯ, ಶ್ರೀ ಪೂಜಾರಿ ಪೂವಯ್ಯ, ಶ್ರೀ ಅಮ್ಮೆ ಸೀತಾರಾಮ್, ಶ್ರೀ ಹೊದ್ದೆಟಿ ಭವಾನಿ ಶಂಕರ್, ಶ್ರೀಅಡ್ಕಾರು ಹೂವಪ್ಪ ಗೌಡ, ಶ್ರೀ ಬೊಳ್ಳಾಣ ಸಾಂತಪ್ಪ ಗೌಡ, ಶ್ರೀ ಕೊಟೇರ ಪೊನ್ನಪ್ಪ, ಶ್ರೀ ಕನ್ನಡ್ಕ ಗಂಗಾಧರಗೌಡ, ಶ್ರೀ ಪಾಣತಲೆ ಕುಶಾಲಪ್ಪ, ಶ್ರೀ ಕೊಡೆಕಲ್ಲು ನಾರಾಯಣಗೌಡ, ಶ್ರೀ ಎಂ.ಕೆ ಗೌಡ, ಕೆ. ಎಂ. ವಿಠಲಗೌಡ, ಕಲ್ಲುಮುಟ್ಲು ಬಸಪ್ಪ, ಶ್ರೀ ಶಿರಗಜೆ ಪೊನ್ನಪ್ಪ, ಶ್ರೀ ಹೊಸೊಕ್ಲು ಪದ್ಮನಾಭ, ಶ್ರೀ ಕೆ. ಗಿರಿಯಪ್ಪ, ಶ್ರೀ ಮೊಟ್ಟೇರ ಕುಶಾಲಪ್ಪ, ಶ್ರೀ ಅಮ್ಮಾಜೀರ ಪೊನ್ನಪ್ಪ, ಜಿಲ್ಲಾ ನ್ಯಾಯಾಧೀಶರಾದ ಶ್ರೀ ಕೇಪಳ ಶಿವರಾಂ, ಶ್ರೀ ತೆಕ್ಕಡೆ ಕಾವೇರಪ್ಪ, ಶ್ರೀ ಅಮ್ಮೆ ತಿಲಕ್, ಶ್ರೀ ಮಾನಿಬೆಟ್ಟು ಬೋಜಪ್ಪ, ಶ್ರೀಮತಿ ಮೂಲೆಮಜಲು ಯಶೋದಮ್ಮ ಶ್ರೀಮತಿ ವೈಶಾಲ್ ಅಮರನಾಥ್, ಶ್ರೀ ಎಂ. ಶಿವಪ್ಪ, ಶ್ರೀ ಟಿ. ಎಸ್, ರಾಜೇಶ್ ಇವರೆಲ್ಲರ ಶ್ರಮವು ನಿಜಕ್ಕೂ ಅಭಿನಂದನಾರ್ಹ.

ವಿದ್ಯಾರ್ಥಿವೇತನ ರೂ.5000/- ಅನ್ನು ಕೊಟ್ಟ ಕೊಡುಗೈ ದಾನಿಗಳು ತುಮಕೂರಿನ ನಂಬುಡಿರ ತಮ್ಮಯ್ಯನವರು ವಾಹನ ಸೌಲಭ್ಯವನ್ನು ಒದಗಿಸಿದವರು ಬೈತಡ್ಕ ಜೋಯಪ್ಪನವರು, ಲಿಟ್ಲ್ ಫ್ಲವರ್ ಇಂಗ್ಲೀಷ್ ಹೈಸ್ಕೂಲ್‌ನವರು ಐಸ್‌ಕ್ರೀಮ್ ಅನ್ನು ಒದಗಿಸಿಕೊಟ್ಟಿದ್ದಾರೆ. ಮಂಗಳೂರಿನ ಒಕ್ಕಲಿಗ ಯಾನೆ ಗೌಡ ಸಮಾಜದ ಗಿರಿಯಪ್ಪಗೌಡರು ಸಮಾರಂಭಕ್ಕೆ 3000 ಇಡ್ಲಿಯನ್ನು ಒದಗಿಸಿದ್ದಾರೆ. ಕೇಕಡ ಬಾಲಕೃಷ್ಣ ಮತ್ತು ಚಿನ್ನಪ್ಪಗೌಡರು 50 ಕ್ಯಾನ್ ಬಿಸ್ಲೇರಿ ನೀರನ್ನು ಅಂದಿನ ಸಮಾರಂಭಕ್ಕೆ ಒದಗಿಸಿಕೊಟ್ಟಿರುತ್ತಾರೆ.

ಲೇಖಕ: ಎಡಕೇರಿ ಸುದರ್ಶನ್.

---

13 ನೇ ಪುಟದಿಂದ

ಒಗ್ಗಟ್ಟಾಗಿ ಒಂದೇ ನಿಲುವು ತಳೆಯಲು ಸಾಧ್ಯವಾಗುವುದೆಂದು ನನ್ನ ಭಾವನೆ. ಈ ಲೇಖನ ವಿಷಯದಲ್ಲಿ ಯಾವುದೇ ರೀತಿಯ ಸಂಶಯವಿದ್ದರೆ ಅದನ್ನು ವ್ಯಕ್ತ ಪಡಿಸಿ ತಿಳಿಸಬಹುದು.

ವಿಳಾಸ : ಪ್ರೊ|| ಪೂಜಾರಿ ಮೊಣ್ಣಪ್ಪ, Advocate & Notary
885/1123 (90) N.G.E.F. Layout Nagara Bhavi, Bangalore - 560 072,
Ph: 3211180

---

## ಗ್ರಂಥ ಋಣ

1.Mysore tribes and caste Mr Ika Iyer volume 1 to 5 (1935)

2. Castes and Tribes in India and caste and tribes in South India of Edger Thomosan and Rangachar

3 Gazetters of Kodagu, Dakshina Kannada, Uthara Kannada, Hassan, Chikkamagalur, Shimogga, Dharawada, Belagam, Ballary, Gulbarga, Raichur, bijapur, Beidar, Chitradurga, Thumkur, Kolar, Banglore, Mandya and Mysore 1985.

## KODAGU EDUCATIONAL ACADEMY (KEA) BANGALORE

Dear Member Brothers/ Sisters of KEA,

By your co-operation, the Kodagu Educational Academy has grown its tentacles and is in a position to move forward. The invitation to you for the inauguration of the Academy was self-explanatory. For those of you, who could not make it on the said day, may have learnt about the developments and the status as on date. The Governing body considers that it is equally important to inform you the present status, besides the need, to introspect and gear up for the future eventualities.

### PRESENT :

"The School has its strength of 11 students. All are in the Nursery Class, as per their age group. We have two teachers and 4 non-teaching staff. These staff are on the salary roll, The salary xcomponent in all Rs. 10,350/- per month. Besides this, the rent of Rs.5,000/- per month, miscellaneous expenses such s telephone, electricity and minor repairs, replacements takesthe academy to a rough expenditure of Rs. 16 to 17,000/- per month.

We wtarted the school quiet late with a run up to finish in projecting the existence of the school. The staff have worked hard, to spread the message in the locality, The school with 11 students is doing well. The performance in the school hos made the parents of the wards happy.

The fee structure is Rs. 150/- P.M., the inflow is Rs. 1,500/- P.M. as against the draw of funds to meet expenditure stated supra. We celebrated the Independence Day. K.A. Belliappa, IAS, and ADvisor of the Academy unfurled the Flag, He had suggested that let the KEA take up the State Government recognition to start school and if situation warrants open up the school till 4th or 5th Standard in the next academic year. The Vice President Smt Vasanthi presided, Dr. K.M. Bojappa, Advisor, addressed the parents to co-operate and assured the better prospectus to the school in future. Sri K.A. Belliappa, IAs, Advisor and Chief Guest emphasized the importance of spiritual nectar in Education and addressed the gathering to mark the celebration a success.

### FUTURE :

Dear Member, we have to strictly follow austerity measures in our finance. We ensured that the 1 day Celebration expenses was met out from simple donations. We have in our A/c Rs. 1,23,000/- as on date. A sum of Rs. 27,000/- for Library is also available. A Scholarship deposit of Rs. 1,17,000/- Rs. 25,000/- in F.D., another Rs, 75,000/- being part of the scholarship will be realised by the dnd of the year, or the school session (March 2002). We have before us mandatory expenses, making expenditure over income to the extent stated above, we hope to get good strength next year. Nevertheless, we have to some how move forward for atleast 2 yearsto turn the scale and have income over expenditure. Such a thing is possible, provided we sustain ourselves, to move forward with confidence. This requires your

participation and co-operation. The total income has been from 60members Rs. 6,60,000/- and Rs. 3 lakhs was paid to Gowda Samaja out of it.

The Governing body is desirous to meet and enroll fresh members. Many will not volunteer, untill approached. It is our duty. We decided to identify the prospective members in our community spread across. The list of the Members, (Money realised) & yet to be realised is availabel for your ready reference. The number of families having members, as against the long list of family is also indicative of the fact that there is scope to harness the fruits, and request them to come under the umbrella of 'KEA'. Those of a family based in Agriculture may join us is future, owing to hardship, but those of urbanites and well to de requires to be approached. The request to become members has to be pleaded. We do realise the amount of Rs. 11,000/- is not a small amount. May it be madein two or three instalments. We have a commitment to repay the Rs. 10,000/- after the gestation period.

Our request to you is to strengthen our hands, and give a serious attention cum response to our request.

"Please identify the prospective members within your strong magnetic field of trust and goodwill, such that if you inform the Academy. The Governing body in Groups along with you intend to approach the esteemed prospective members. We requestyou to kindly respond and give the prospective members name and address. It will be ideal, if you have expressed the subject matter before informing us the name and address of such persons. In any event the Governing Body request you to respond to this letter. A national target of 10 prospectus." We have before us inevitable expenditure to make classrooms,and, build infrastructure, within next 3 to 4 months. tis is where your help is solicited. Your contact with our community NRI is equally important. We aspire that all families areunder the umbrellaof KEA.

With warm regards,

Yours faithfully
General Secretary
(KEA)

PS: You are requested to appraise prospective members from family left out (which are more than 250 to 300).

We welcome your valuable suggestion to make this institution a good institution. Let us move forward with confidence. Give a minute to think it objectvely.

**SUPPORTED BY :**

1. Ame Kalappa 2. Ame Himalakshi Kalappa 3. Amavana P. Vasu. 4. Bythadka Joyappa 5. Dr. Chettimade Anand 6. Chettimda Sulochana Ananda 7. Dr. Chettimade Mrs. Kuttappa 8. Dr. Chettimade Uthappa 9. Chettimade Mrs. Uthappa 10. Chettimade Punya Prasad 11. Chettimade Prasad Poovaiah 12. Prof. Cheremane Ramachandra 13. Cheyandi Basappa 14. Dambekodi Chandrashekar 15. Dr. Guddere Chinnaiah 16. Hosuru J. Shivaram 17. Hosuru Mr.s Vasanthi 18. Hosur Dr. Vasanth Kumar 19. Huderi Basappa 20. Kallurnutiu Basappa 21. Dr. Kaveri M. Bojappa 22. Ketoli Yatish 23. Ketoli Rajagopal 24. Kalayana Machiah 25. Kudukuli Janardhana 26. Kedambade Gopalkrishna 27. Karnyana Lakshmana 28. Kombarana Subbiah 29. Kombanda G. Bheemaiah 30. Kolibailu Belliappa IAS 31. Kundiyana A. Appaji 32. Kudupaje Ganapathi 33. Kudupaje Mohan 34. Moote G. Uthappa 35. Moole Manjilu Yashoda Chinnappa 36. Mallandira N. Kariappa 37. Mottana C. Ravikumar 38. Mukkati Manoj 39. Mukkati Mr. Manoj 40. Nangaru Naniah 41. Nangaru Ramachandra 42. Nangaru Ningaraju 43. Nagari G. Kiran 44. Nangari Yashodamma 45. Nangaru B. Chinnappa 46. Nangaru Yeshodamma 47. Odiyana Dayanda 48. Pandana S. Muddappa49. Panthale Padmanabha 50. Panthale Prema Padmanabha 51. Panthale Palangappa 52. Serekaje Chinnappa 53. Sullekodi Amarnath 54. Tadiapana B. Nalini 55. Tadiapana P. Janardhana 56. Tadiapana P. Kumarjaya 57. Tadiapana Thej Kumar 58. Tenana Rajesh 59. Dr. Thotambailu Muddappa 59. Ududolira Somappa

**Amount yet to be realised from post dated cheques/Promises**

Pambarna S. Madappa, Bittara I Shambu, Dr. Chettimade Kuttappa, Kuranji Manmohan, Rani Chandre Gowda, Anera Uthappa, Taluru Nagesh, Hosuru M. Vasanthkumar, Nedemale P. Vasanthkumar, Kuymudi Anitha Rani, Katarathana Rajesh

## ಅನಾರೋಗ್ಯದಿಂದ ಸಾವಿಗೀಡಾದ ಗಡಿಭದ್ರತಾ ಪಡೆಯ ಯೋಧ ಕಾರ್ಲಾಡಿ ಕೃಷ್ಣಪ್ಪ



ಕಳೆದ ಕೆಲ ಸಮಯಗಳಿಂದ ಅನಾರೋಗ್ಯ ಪೀಡಿತರಾಗಿ 8-10-2002 ರಂದು ನಿಧನರಾದ ಗಡಿ ಭದ್ರತಾ ಪಡೆಯ ಯೋಧ ಕಾರ್ಲಾಡಿ ಕೃಷ್ಣಪ್ಪ (30) ಅವರ ಅಂತ್ಯಕ್ರಿಯೆ ನೆಲ್ಲಿ ಹುದಿಕೇರಿ ಬರಡಿಯಲ್ಲಿ ಸಕಲ ಗೌರವಗಳೊಂದಿಗೆ ನೆರವೇರಿತು.

ಸಾರ್ವಜನಿಕರು ಅಧಿಕ ಸಂಖ್ಯೆಯಲ್ಲಿ ಅಂತ್ಯಕ್ರಿಯೆ ಸಂದರ್ಭದಲ್ಲಿ ಪಾಲ್ಗೊಂಡಿದ್ದರು. ಪೊಲೀಸ್ ಇಲಾಖೆಯ ಪರವಾಗಿ ಎ. ಎಸ್.ಐ ಪಿ. ಬಿ. ನಾಣಯ್ಯ ಮತ್ತು ಸಿಬ್ಬಂದಿಗಳು ಗೌರವ ಸಲ್ಲಿಸಿದರು. ಇದೇ ಸಂದರ್ಭದಲ್ಲಿ ನೆಲ್ಲಿ ಹುದಿಕೇರಿ ಗ್ರಾಮ ಪಂಚಾಯ್ತಿ ಅಧ್ಯಕ್ಷರಾದ ಮಹಮದ್ ಅವರು ಪುಷ್ಪ ಗುಚ್ಛಗಳನ್ನು ಅರ್ಪಿಸಿ ಯೋಧನಿಗೆ ಅಂತಿಮ ಗೌರವ ಸಲ್ಲಿಸಿದರು.

ನೆಲ್ಲಿ ಹುದಿಕೇರಿ ಬರಡಿಯ ದಿ|| ಕಾರ್ಲಾಡಿ ಮೋಣಪ್ಪ ಅವರ ಪುತ್ರರಾದ ಕಾರ್ಲಾಡಿ ಕೃಷ್ಣಪ್ಪ ಅವರು ಗುಜರಾತ್ ಗಡಿಯಲ್ಲಿ ಸೇವೆ ಸಲ್ಲಿಸುತ್ತಿದ್ದ ಸಂದರ್ಭ ಪ್ರಸಕ್ತ ಸಾಲಿನ ಜೂನ್ ೨೦ ರ ಸುಮಾರಿಗೆ ಮಲೇರಿಯಾ ಜ್ವರಕ್ಕೆ ತುತ್ತಾಗಿ, ಆಸ್ಪತ್ರೆಗೆ ದಾಖಲಾಗಿದ್ದರು. ಬಂಧುಗಳು ಕೃಷ್ಣಪ್ಪ ಅವರನ್ನು ಮರ ಗೋಡಿಗೆ ಕರೆತಂದು ಚಿಕಿತ್ಸೆ ನೀಡಲಾಗುತ್ತಿತ್ತು.

ತೀವ್ರ ಚಿಂತಾಜನಕ ಸ್ಥಿತಿಯಲ್ಲಿದ್ದ ಕಾರ್ಲಾಡಿ ಕೃಷ್ಣಪ್ಪ ಗೌಡ ಅವರಿಗೆ ಅಗತ್ಯ ಚಿಕಿತ್ಸೆಗಳನ್ನು ನೀಡಿದರೂ ಫಲಕಾರಿಯಾಗದೆ 8-10-02 ರಂದು ತಮ್ಮ ಸ್ವಗೃಹದಲ್ಲಿ ನಿಧನರಾದರು.

ಕೃಷ್ಣಪ್ಪಗೌಡರು 1984 ರಲ್ಲಿ ಗಡಿ ಭದ್ರತಾ ಪಡೆಗೆ ಸೇರ್ಪಡೆಗೊಂಡು ಹಾಲಿ ಶ್ರೀನಗರದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಮಾರ್ಚ್ ತಿಂಗಳಲ್ಲಿ ಗುಜರಾತ್‌ನಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸಂದರ್ಭ ಮಲೇರಿಯಾಕ್ಕೆ ತುತ್ತಾಗಿ ಹದಿ ಹರೆಯದ ರಾಷ್ಟ್ರ ಶಕ್ತಿ ಚೇತನವು ಈ ರೀತಿಯ ಅಕಾಲ ಮರಣವನ್ನಪ್ಪಿದ್ದು ಕೊಡಗಿನ ಜನತೆಗೆ ಸಹಿಸಲಾರದ ದುಃಖವಾಗಿದೆ. ಅವರ ಆತ್ಮಕ್ಕೆ ಕುಲಗುರು ಶ್ರೀ ವೆಂಕಟರಮಣನು ಚಿರಶಾಂತಿಯನ್ನು ಕರುಣಿಸಲಿ ಎಂದು ಹಾರೈಸೋಣ. ನಾಲ್ಕು ಗಂಡು ಮಕ್ಕಳಲ್ಲಿ ಇವರು ಕೊನೆಯವರಾಗಿದ್ದರು.

ವರದಿ: ಕೊಡಗು ಸಂಗಾತಿ.

# ಪಾಕ್ ಶೆಲ್ ಧಾಳಿಯಲ್ಲಿ ಹುತಾತ್ಮನಾದ ಕೊಡಗಿನ ಯೋಧ ಮಂಞ್ಞಾಂಡ್ರ ಉತ್ತಯ್ಯ ಕುಟ್ಟಪ್ಪ ಪಂಚಭೂತದಲ್ಲಿ ಲೀನ



ಭಾರತದ ಗಡಿ ರಕ್ಷಣೆ ಸಂದರ್ಭ ಪಾಕಿಸ್ತಾನದ ಶೆಲ್ ಧಾಳಿಯಲ್ಲಿ ಹುತಾತ್ಮನಾದ ಜಿಲ್ಲೆಯ ವೀರ ಯೋಧ, ಹುತಾತ್ಮ ಮಂಞಾಂಡ್ರ ಕುಟ್ಟಪ್ಪ (35) ಅವರ ಅಂತ್ಯಕ್ರಿಯೆಯು ಜನ ಸಾಗರದ ದುಃಖಾಶ್ರುಗಳ ನಡುವೆ ಮಡಿಕೇರಿ ಸಮೀಪದ ಐಕೊಳ ಗ್ರಾಮದಲ್ಲಿ ಸಕಲ ಗೌರವಗಳೊಂದಿಗೆ ನೆರವೇರಿತು.

ಕುಟ್ಟಪ್ಪ ಅವರ ಅಣ್ಣ ಮುದ್ದಯ್ಯನ ಮಗ, ಮಂಞಾಂಡ್ರ ತೀರ್ಥ ಪ್ರಸಾದ್ ಅವರು ಬೆಳಿಗ್ಗೆ 9-10-02ರ ಬೆಳಿಗ್ಗೆ ೧೧.೪೫ ಗಂಟೆಗೆ ಚಿತೆಗೆ ಅಗ್ನಿ ಸ್ಪರ್ಶ ಮಾಡುವುದರೊಂದಿಗೆ ಜಿಲ್ಲೆಯ ಹುತಾತ್ಮ ಯೋಧರ ಇತಿಹಾಸದಲ್ಲಿ ಹವಾಲ್ದಾರ್ ಮಂಞಾಂಡ್ರ ಕುಟ್ಟಪ್ಪ ಅವರ ಹೆಸರು ಅಜರಾಮರವಾಯಿತು.

ಗಡಿ ಭದ್ರತಾ ಪಡೆಯಲ್ಲಿ ಹವಾಲ್ದಾರ್ ಆಗಿದ್ದ ಮಂಞಾಂಡ್ರ ಕುಟ್ಟಪ್ಪ ಅವರು ಜಮ್ಮುವಿನ ಬಾರಾಮುಲ್ಲಾ ವ್ಯಾಪ್ತಿಯಲ್ಲಿ ಕರ್ತವ್ಯ ನಿರತರಾಗಿದ್ದ ಸಂದರ್ಭ 6-10-2002 ರ ರಾತ್ರಿ ಅಂದಾಜು ೮.೩೦ ಗಂಟೆಗೆ ಪಾಕಿಸ್ತಾನದ ಶೆಲ್ ಧಾಳಿಗೆ ಆಹುತಿಯಾಗಿ, ಭಾರತ ಮಾತೆಗೆ ರಕ್ತ ತರ್ಪಣಗೈದಿದ್ದರು. ಶ್ರೀನಗರದಿಂದ ಹೊರಟ ಕುಟ್ಟಪ್ಪ ಅವರ ಪಾರ್ಥಿವ ಶರೀರವನ್ನೊಳಗೊಂಡ ವಾಹನ ಜಮ್ಮು ಮೂಲಕ ದೆಹಲಿಯ ಇಂದಿರಾಗಾಂಧಿ ವಿಮಾನ ನಿಲ್ದಾಣ ಮೂಲಕ ಬೆಂಗಳೂರಿಗೆ ತರಲಾಯಿತು. ಬಿಎಸ್‌ಎಫ್‌ನ ಹಿರಿಯ ಅಧಿಕಾರಿ ಮೇಜರ್ ಸಂಜಯ್ ಅವಿನಾಶ್ ಮತ್ತು ಸಿಬ್ಬಂದಿಗಳು ಸ್ವಾಗತಿಸಿ, ಅಲ್ಲಿಂದ ೧೭ ಮಂದಿ ಸಿಬ್ಬಂದಿಗಳೊಂದಿಗೆ ಕೊಡಗಿಗೆ ತರಲಾಯಿತು.

ಪಾರ್ಥಿವ ಶರೀರವನ್ನೊಳಗೊಂಡ ವಿಶೇಷ ಸೇನಾ ವಾಹನ ಬೆಳಿಗ್ಗೆ 5-30 ಕ್ಕೆ ಕುಶಾಲನಗರ ಕೊಪ್ಪ ಗೇಟ್‌ಗೆ ಆಗಮಿಸಿದಾಗ ಕುಶಾಲನಗರ ಪೊಲೀಸ್ ಠಾಣಾಧಿಕಾರಿ ಅಣ್ಣಳವಾಡ ಬಿ. ದೇವಯ್ಯ ಅವರು ಗೌರವ ಪೂರ್ವಕವಾಗಿ ಬರಮಾಡಿಕೊಂಡರು. ಈ ಸಂದರ್ಭ ಐಕೊಳ ಗ್ರಾಮದ ಮಂಡಳಿ ಅಧ್ಯಕ್ಷೆ ಉಳುವಾರನ ಶೀಲಾ ಪೊನ್ನಪ್ಪ ಮತ್ತು ಸದಸ್ಯರು, ಮರಗೋಡು ಗೌಡ ಸಮಾಜದ ಅಧ್ಯಕ್ಷ ಕೊಂಪುಳೀರ ಪುಟ್ಟಯ್ಯ ಅವರು ಹಾಜರಿದ್ದರು.

ಅಂದು ಬೆಳಿಗ್ಗೆ ೭ರಿಂದ ೮ ಗಂಟೆಯವರೆಗೆ ಮರಗೋಡು ಗೌಡ ಸಮಾಜದಲ್ಲಿ ಹುತಾತ್ಮ ಮಂಞಾಂಡ್ರ ಕುಟ್ಟಪ್ಪ ಅವರ ಪಾರ್ಥಿವ ಶರೀರವನ್ನು ಸಾರ್ವಜನಿಕ ವೀಕ್ಷಣೆಗಾಗಿ ಇಡಲಾಗಿತ್ತು. ನೂರಾರು ಸಾರ್ವಜನಿಕರು ಯೋಧನ ಅಂತಿಮ ದರ್ಶನ ಪಡೆದರು.

ಮರಗೋಡಿನಿಂದ ಪಾರ್ಥೀವ ಶರೀರವನ್ನು ಯೋಧನ ಸ್ವಗೃಹವಾದ ಐಕೊಳ ಮನೆಗೆ ತರಲಾಯಿತು. ಗೌಡ ಸಂಸ್ಕೃತಿ,ಪದ್ಧತಿ ಪ್ರಕಾರ ಅಂತ್ಯಕ್ರಿಯೆಗೆ ಶಾಸ್ತ್ರೋಕ್ತ ವ್ಯವಸ್ಥೆ ಮಾಡಲಾಗಿತ್ತು. ಅಂದು ಬೆಳಿಗ್ಗೆ ೧೧.೧೫ ಗಂಟೆಯವರೆಗೆ ಸಾರ್ವಜನಿಕರು ಹುತಾತ್ಮ ಯೋಧನ ಅಂತಿಮ ದರ್ಶನ ಪಡೆದರು. ಭಾರತಾಂಬೆಯ ರಕ್ಷಣೆಯಲ್ಲಿ ರಕ್ತ ತರ್ಪಣ ಗೈದ ವೀರ ಯೋಧನ ಅಂತಿಮ ದರ್ಶನ ಪಡೆದ ಜನರು ದುಃಖಾಶ್ರುಗಳ ನಮನ ಸಲ್ಲಿಸಿದರು. ಈ ಸಂದರ್ಭ ಮೇಜರ್ ಸಂಜಯ್ ಅವಿನಾಶ್ ಮತ್ತು ಸಿಬ್ಬಂದಿಗಳು, ಮೂರು ಸುತ್ತು ಗುಂಡು ಹಾರಿಸಿ ಅಂತಿಮ ಗೌರವ ಸಲ್ಲಿಸಿದರು. ಸಾವಿರಾರು ಸಾರ್ವಜನಿಕರು, ಬಂಧು ಬಳಗದವರ ಉಪಸ್ಥಿತಿಯಲ್ಲಿ ಪಾರ್ಥಿವ ಶರೀರವನ್ನು ಸ್ಮಶಾನದತ್ತ ಕೊಂಡೊಯ್ಯುವ ಸಂದರ್ಭ 'ಕುಟ್ಟಪ್ಪ ಅಮರ್ ರಹೇ...........', 'ಭಾರತ್ ಮಾತಾಕೀ ಜೈ........'ಘೋಷಣೆಗಳೊಂದಿಗೆ 'ಪಾಕಿಸ್ತಾನ್ ಕೋ ಮಾರ್‌ಡಾಲೋ...........' ಎಂಬಿತ್ಯಾದಿ ಘೋಷಣೆಗಳೂ ಮುಗಿಲು ಮುಟ್ಟಿದವು.

ಅಂತ್ಯಕ್ರಿಯೆಯ ಸಂದರ್ಭ ಮಡಿಕೇರಿ ಪುರಸಭಾಧ್ಯಕ್ಷೆ ಕೂಡಕಂಡಿ ಕಾವೇರಮ್ಮ ಸೋಮಣ್ಣ, ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯ ಅಧ್ಯಕ್ಷ ತುಂತಜೆ ಗಣೇಶ್, ಮೂರ್ನಾಡು ಗೌಡ ಸಮಾಜದ ಅಧ್ಯಕ್ಷ ಪಾಣತ್ತಲೆ ತಮ್ಮಯ್ಯ, ಜಿಲ್ಲಾ ಪಂಚಾಯಿತಿ ಯೋಜನಾಧಿಕಾರಿ ಸಿದ್ದಪ್ಪ, ತಹಶೀಲ್ದಾರ್ ವಿ. ಎಲ್. ಹೆಗಡೆ, ಪೊಲೀಸ್ ವೃತ್ತ ನಿರೀಕ್ಷಕ ಸುಂದರರಾಜ್, ಗ್ರಾಮಾಂತರ ಸಿಐ ರಾಜಪ್ಪ, ಗ್ರಾಮಾಂತರ ಠಾಣಾಧಿಕಾರಿ ಲಿಂಗಪ್ಪ ಇನ್ನಿತರರು ಹಾಜರಿದ್ದರು.

ಹುತಾತ್ಮ ಯೋಧ ಕುಟ್ಟಪ್ಪ ಅವರ ಅಂತ್ಯಕ್ರಿಯೆಗಾಗಿ ಬಿಎಸ್‌ಎಫ್‌ನಿಂದ ನೀಡಲಾಗಿದ್ದ ರೂ. ೫ ಸಾವಿರ ನಗದನ್ನು ಇದೇ ಸಂದರ್ಭ ಬಿಎಸ್‌ಎಫ್ ಯೋಧ ಕೋಳೇರ ಚಂಗಪ್ಪ ಅವರು, ಕುಟ್ಟಪ್ಪ ಅವರ ತಾಯಿ ಸೀತಮ್ಮ ಅವರಿಗೆ ಹಸ್ತಾಂತರಿಸಿದರು. ಹುತಾತ್ಮ ಯೋಧನ ಅಂತ್ಯಕ್ರಿಯೆಯು ಮರಗೋಡು ಪಟ್ಟಣದ ಎಲ್ಲಾ ಅಂಗಡಿ-ಮುಂಗಟ್ಟುಗಳನ್ನು ಮುಚ್ಚುವ ಮೂಲಕ ಗೌರವ ಸಲ್ಲಿಸಲಾಯಿತು.

***ಹುತಾತ್ಮ ಯೋಧ***

ಮರಗೋಡಿನಲ್ಲಿ ಪ್ರಾಥಮಿಕ ವಿಧ್ಯಾಭ್ಯಾಸ ಪೂರೈಸಿದ ಮಂಞಾಂಡ್ರ ಕುಟ್ಟಪ್ಪ ೧೯೮೭ ರಲ್ಲಿ ಭಾರತೀಯ ಗಡಿರಕ್ಷಣಾ ಪಡೆಗೆ ಸೇರಿದರು. ಪ್ರಸ್ತುತ ಬಿಎಸ್‌ಎಫ್‌ನ ೧೫ನೇ ಬೆಟಾಲಿಯನ್ "ಬಿ" ಕಂಪೆನಿಯಲ್ಲಿ ಹವಾಲ್ದಾರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದರು. ಕರ್ತವ್ಯ ನಿರತರಾಗಿದ್ದ ಸಂದರ್ಭ ಪಾಕ್‌ಶೆಲ್ ಧಾಳಿಗೆ ತುತ್ತಾಗಿರುವ ಮಂಞಾಂಡ್ರ ಕುಟ್ಟಪ್ಪ ಅವರು ಹುತಾತ್ಮ ಯೋಧರ ಸಾಲಿಗೆ ಸೇರುವ ಮೂಲಕ ಅಮರರಾಗಿದ್ದಾರೆ.

***ಪಾಕ್ ಸೇನೆಯ ಶೆಲ್ ಧಾಳಿಯಲ್ಲಿ ಕುಟ್ಟಪ್ಪ ಸೇರಿ ಮೂವರ ವೀರ ಮರಣ***

ಭಾರತದ ಗಡಿ ಪ್ರದೇಶವಾದ ಬಾರಾಮುಲ್ಲಾ ವ್ಯಾಪ್ತಿಯಲ್ಲಿ ಇದೇ 6-10-2002 ರಂದು ಪಾಕಿಸ್ತಾನದ ಸೇನೆಯಿಂದ ನಡೆದ ಶೆಲ್ ಧಾಳಿಯಲ್ಲಿ ಮಂಞಾಂಡ್ರ ಕುಟ್ಟಪ್ಪ ಸೇರಿದಂತೆ ಭಾರತೀಯ ಗಡಿಭದ್ರತಾ ಪಡೆಯ ಐವರು ಮತ್ತು ಸೇನೆಯ ಒಬ್ಬ ಯೋಧ ಹುತಾತ್ಮರಾಗಿದ್ದಾರೆ.

ಪತ್ರಕರ್ತರಿಗೆ ಐಕೊಳದಲ್ಲಿ ಈ ಬಗ್ಗೆ ಮಾಹಿತಿ ನೀಡಿದ ಗಡಿ ಭದ್ರತಾ ಪಡೆಯ ಯೋಧ ಕೋಣಕಟ್ಟೆಯವರೇ ಆದ ಕೋಳೇರ ಚಂಗಪ್ಪ ಅವರು 6-10-02 ರಂದು ರಾತ್ರಿ ೮.೩೦ರ ಸುಮಾರಿಗೆ ಬಾರಮುಲ್ಲಾ ಪ್ರದೇಶದಲ್ಲಿ ಪಾಕಿಸ್ತಾನ ಸೇನೆಯಿಂದ ತೀವ್ರ ಶೆಲ್ ಧಾಳಿ ನಡೆಯಿತು. ಈ ಸಂದರ್ಭ ಕರ್ತವ್ಯದಲ್ಲಿದ್ದ ಭಾರತೀಯ ಯೋಧರು ತೀವ್ರ ಪ್ರತಿರೋಧ ಒಡ್ಡಿದರಾದರೂ ಮಂಞಾಂಡ್ರ ಕುಟ್ಟಪ್ಪ ಅವರು ಸ್ಥಳದಲ್ಲೇ ಅಸು ನೀಗಿದರು. ಇನ್ನೊರ್ವ ಬಿ. ಎಸ್.ಎಫ್ ಯೋಧ ದಿಲ್ಬರ್ ಸಿಂಗ್ ಆಸ್ಪತ್ರೆಗೆ ಸಾಗಿಸುವ ಹಾದಿಯಲ್ಲಿ ಸಾವಿಗೀಡಾಗಿದ್ದಾರೆ. ಭಾರತೀಯ ಸೇನೆಯ ಯೋಧರೊಬ್ಬರು ಆಸ್ಪತ್ರೆಯಲ್ಲಿ ಅಸು ನೀಗಿದ್ದಾರೆ ಎಂದರಲ್ಲದೇ, ಈ ಘಟನೆಯಲ್ಲಿ ಒಟ್ಟು ೭ ಮಂದಿ ಗಂಭೀರ ಗಾಯಗೊಂಡಿದ್ದಾರೆ ಎಂದು ವಿವರ ನೀಡಿದರು.

ಇಲ್ಲಿನವರೆಗೂ ಪಾಕಿಸ್ತಾನದ ಶೆಲ್ ಧಾಳಿಗಳನ್ನು ತಮ್ಮ ಯೂನಿಟ್ ಯಶಸ್ವಿಯಾಗಿ ಎದುರಿಸಿತ್ತು. ಇದೇ ಪ್ರಥಮ ಬಾರಿಗೆ ಶೆಲ್‌ಗಳು ಮಿಷಿನ್‌ಗಳ ಮೇಲೆ ಬಿದ್ದುದರಿಂದಾಗಿ ಧಾಳಿಯ ತೀವ್ರತೆ ಹೆಚ್ಚಿತ್ತು. ಇದಕ್ಕೂ ಮೊದಲು ಕುಟ್ಟಪ್ಪ ಅವರು ಅನೇಕ ಬಾರಿ ವಿರೋಧಿಗಳ ಎದುರು ಪ್ರತಿಧಾಳಿ ಮಾಡಿದ್ದರು. ಆದರೆ ಈ ಬಾರಿ ಕುಟ್ಟಪ್ಪ ಅವರ ತೀವ್ರತರದ ದಾಳಿ ನಡೆದ ಕಾರಣ ಅವರು ಹುತಾತ್ಮರಾದರು ಎಂದು ಚಂಗಪ್ಪ ದುಃಖದಿಂದ ಹೇಳಿದರು.

ಹುತಾತ್ಮ ಯೋಧ ಕುಟ್ಟಪ್ಪ ಅವರ ತಂದೆ ಉತ್ತಯ್ಯ ಅವರು ಪತ್ರಿಕೆಯೊಂದಿಗೆ ಮಾತನಾಡಿ, ಆತನ ಆಗಲಿಕೆಯಿಂದ ನೋವಾಗಿದ್ದರೂ, ಇಡೀ ದೇಶಕ್ಕಾಗಿ ತನ್ನ ಪ್ರಾಣಾರ್ಪಣೆಮಾಡಿರುವ ಕುಟ್ಟಪ್ಪನ ಬಗ್ಗೆ ತಮಗೆ ಹೆಮ್ಮೆಯೆನಿಸುತ್ತಿದೆ ಎಂದು ಭಾವುಕರಾಗಿ ನುಡಿದರು.

ಮಂಞಾಂಡ್ರ ಕುಟ್ಟಪ್ಪ ಅವರು ಹುತಾತ್ಮರಾಗಿರುವ ಬಗ್ಗೆ ಕೊಡಗು ಜಿಲ್ಲೆಗೆ ದೂರವಾಣಿ ಮೂಲಕ ತಿಳಿಸುವ ಸಂದರ್ಭ ಹಲವು ತೊಡಕುಗಳನ್ನು ಎದುರಿಸಬೇಕಾಯಿತು ಎಂದು ಚಂಗಪ್ಪ ತಿಳಿಸಿದರಲ್ಲದೆ ತಮಗೆ ಅಗತ್ಯವಿರುವ ನಂಬರ್‌ಗೆ ಡಯಲ್ ಮಾಡುವ ಸಂದರ್ಭ ಮಡಿಕೇರಿಯ ಓಂಕಾರೇಶ್ವರ ದೇವಾಲಯದ ಅರ್ಚಕರ ಮನೆ, ಕೆಲವು ಮುದ್ರಣಾಲಯ ಮತ್ತಿತರ ಬೇರೆ ಸ್ಥಳಗಳಿಗೆ ಸಂಪರ್ಕವಾಗುತ್ತಿತ್ತು ಎಂದ ಅವರು, ಜಿಲ್ಲೆಯಲ್ಲಿ ಟೆಲಿಫೋನ್ ಸಂಪರ್ಕ ವ್ಯವಸ್ಥೆ ಸಮರ್ಪಕವಾಗಿಲ್ಲ ಎಂದು ಅಸಮಾಧಾನ ತೋಡಿಕೊಂಡರು. ಹುತಾತ್ಮ ಯೋಧನ ಪಿಂಚಣಿ, ಜೀವ ವಿಮೆ ಇತ್ಯಾದಿ ಸೌಲಭ್ಯಗಳನ್ನು ಒದಗಿಸುವ ಹಿನ್ನಲೆಯಲ್ಲಿ ಕೋಳೇರ ಚಂಗಪ್ಪ ಅವರು ಮೂರು ದಿನ ಕೊಡಗಿನಲ್ಲಿ ತಂಗಿ ಎಲ್ಲವನ್ನು ಸರಿಪಡಿಸಿ ಮರಳಿದ್ದಾರೆ.

ಚಿತ್ರಲೇಖನ : ಅಂಚೆಮನೆ ಸುಧಿ.

ಜನ ಸಾಗರದ ದುಃಖಾಶ್ರುಗಳ ನಡುವೆ ಐಕೊಳದಲ್ಲಿ ಅಂತ್ಯಕ್ರಿಯೆ.....ರಾಷ್ಟ್ರಧ್ವಜ ಹೊದ್ದು ಚಿರನಿದ್ದೆಯಲ್ಲಿ ಯೋಧ ಹುತಾತ್ಮ ಯೋಧನ ಅಂತಿಮ ದರ್ಶನಕ್ಕೆ ಕಾದಿರುವ ಸಾರ್ವಜನಿಕರು.



## ಜಿಲ್ಲಾಡಳಿತದ ವಿರುದ್ಧ ವ್ಯಕ್ತವಾದ ಆಕ್ರೋಶ !

ಹುತಾತ್ಮ ಯೋಧ ಮಂಞಾಂಡ್ರ ಕುಟ್ಟಪ್ಪ ಅವರ ಪ್ರಾರ್ಥಿವ ಶರೀರವನ್ನು ಜಿಲ್ಲಾಡಳಿತದ ವತಿಯಿಂದ ಬರಮಾಡಿಕೊಳ್ಳುವಲ್ಲಿ ನಿರ್ಲಕ್ಷ್ಯ ತಾಳಲಾಗಿದೆ ಎಂದು ಆರೋಪಿಸಿ, ಜಿಲ್ಲಾಧಿಕಾರಿಗಳನ್ನು ತಡೆದು ನಾಗರಿಕರು ಆಕ್ರೋಶ ವ್ಯಕ್ತ ಪಡಿಸಿದ ಘಟನೆ ಐಕೊಳದಲ್ಲಿ ನಡೆಯಿತು.

ಬೆಳಿಗ್ಗೆ ೧೧.೩೦ ಗಂಟೆಗೆ ಜಿಲ್ಲಾಧಿಕಾರಿ ಬಿ. ಎಸ್. ಪಾಲಾಕ್ಷ ಮತ್ತು ಪೊಲೀಸ್ ವರಿಷ್ಠಾಧಿಕಾರಿ ಉಮೇಶ್ ಕುಮಾರ್ ಅವರು ಹುತಾತ್ಮ ಯೋಧ ಮಂಞಾಂಡ್ರ ಕುಟ್ಟಪ್ಪ ಅವರ ಮನೆಗೆ ಆಗಮಿಸಿ, ಯೋಧನ ಪ್ರಾರ್ಥಿವ ಶರೀರಕ್ಕೆ ಗೌರವ ಸಲ್ಲಿಸುವ ಮೊದಲೇ ಅಯ್ಯಪ್ಪ ಯುವಕ ಸಂಘದ ಸ್ಥಾಪಕಾಧ್ಯಕ್ಷ ಕೊಂಪುಳಿರ ಗಣೇಶ್ ಬೋಪಯ್ಯ, ಅಧ್ಯಕ್ಷ ಪಾರೇರ ವಸಂತ್ ಮತ್ತಿತರರು ತಡೆದರು. ವೀರರ ನಾಡಾದ ಕೊಡಗಿನ ಯೋಧನೊಬ್ಬ ದೇಶಕ್ಕಾಗಿ ಪ್ರಾಣಾರ್ಪಣೆ ಗೈದು, ಪ್ರಾರ್ಥಿವ ಶರೀರ ಜಿಲ್ಲೆಗೆ ಆಗಮಿಸುವ ಸಂದರ್ಭ ಜಿಲ್ಲೆಯ ಗಡಿಯಾದ ಕೊಪ್ಪ ಗೇಟ್‌ನಲ್ಲಿ ಜಿಲ್ಲಾಡಳಿತವು ಬರಮಾಡಿಕೊಳ್ಳುವಲ್ಲಿ ತೀವ್ರ ನಿರ್ಲಕ್ಷ್ಯ ತಾಳಿದೆ ಎಂದು ಆರೋಪಿಸಿದರು.

ಈ ಬಗ್ಗೆ ಜಿಲ್ಲಾಧಿಕಾರಿಗಳು, ಸಚಿವ ಟಿ. ಜಾನ್ ಅವರೊಂದಿಗೆ ತಾವು ಬರ ಪರಿಶೀಲನೆಗೆ ತೆರಳಿದ್ದುದಾಗಿ ಹೇಳಿದರಾದರೂ ನಾಗರಿಕರ ಅಸಮಾಧಾನ ತಿಳಿಗೊಳ್ಳಲಿಲ್ಲ. ಅಷ್ಟರಲ್ಲಿ ಗ್ರಾಮಸ್ಥರೊಬ್ಬರು ಹುತಾತ್ಮ ಯೋದನ ಅಂತಿಮ ಸಂಸ್ಕಾರಕ್ಕೆ ಅಗತ್ಯ ಕ್ರಮ ಕೈಗೊಳ್ಳುವಂತೆ ರಾಜ್ಯ ಸರ್ಕಾರದಿಂದ ಜಿಲ್ಲಾಡಳಿತಕ್ಕೆ ಬಂದಿದ್ದ ಫ್ಯಾಕ್ಸ್ ಸಂದೇಶದ ಪ್ರತಿಯನ್ನು ತೋರಿಸಿದಾಗಲೂ, ಈ ಬಗ್ಗೆಯೂ ತಮಗೆ ಮಾಹಿತಿಯಿಲ್ಲ ಎಂದು ಜಿಲ್ಲಾಧಿಕಾರಿಗಳು ಹೇಳಿರುವುದು ನಿಜಕ್ಕೂ ಆಶ್ಚರ್ಯವೆನಿಸಿದೆ.

ಜಿಲ್ಲೆಯ ಯಾವುದೇ ಜನ ಪ್ರತಿನಿಧಿಗಳಿಗೆ ಕಿಂಚಿತ್ ದೇಶಭಕ್ತಿ ಇಲ್ಲ. ಹುತಾತ್ಮ ಯೋಧನ ಪಾರ್ಥಿವ ಶರೀರವನ್ನು ಬರಮಾಡಿಕೊಳ್ಳಬೇಕೆಂಬ ಕನಿಷ್ಠ ಜ್ಞಾನವೂ ಇಲ್ಲದಿರುವುದು ವಿಪರ್ಯಾಸ. ಕೇವಲ ವೇದಿಕೆಗಳಲ್ಲಿ ದೇಶಭಕ್ತಿ, ರಕ್ಷಣೆ ಇತ್ಯಾದಿಗಳ ಬಗ್ಗೆ ಮಾತನಾಡುವ ಇವರು, ತಾಯ್ನಾಡಿನ ರಕ್ಷಣೆಯಲ್ಲಿ ಹುತಾತ್ಮನಾದ ವೀರ ಯೋಧನಿಗೆ ಗೌರವ ಸಲ್ಲಿಸಬೇಕೆಂಬ ಅರಿವಿಲ್ಲದಿದ್ದುದು ದುಃಖಂಡನೀಯ ಎಂದರಲ್ಲದೇ ಇದೇ ಅಭಿಪ್ರಾಯವನ್ನು ನಾಗರಿಕರೂ ವ್ಯಕ್ತ ಪಡಿಸಿದರು.



ಕುಟ್ಟಪ್ಪನವರ ಅಂತ್ಯಕ್ರಿಯೆಗಾಗಿ ಬಿ.ಎಸ್.ಎಫ್‌ನಿಂದ ಅಂತಿಮ ಸಂಸ್ಕಾರಕ್ಕಾಗಿ ನೀಡಲ್ಪಟ್ಟ ಹಣವನ್ನು ಕೋಳೇರ ಚಂಗಪ್ಪ ಮೃತರ ತಾಯಿ ಸೀತಮ್ಮನವರಿಗೆ ಹಸ್ತಾಂತರಿಸಿದರು.



ಕುಟ್ಟಪ್ಪನ ಪಾರ್ಥಿವದೊಂದಿಗೆ ಆಗಮಿಸಿದ ಕೋಳೇರ ಚಂಗಪ್ಪ ಮತ್ತು ಸಂಸಾರ ದುಃಖ ಸಾಗರದಲ್ಲಿ



ಬಿ.ಎಸ್.ಎಫ್. ತುಕಡಿಯಿಂದ ಅಂತಿಮ ನಮನ ಸಲ್ಲಿಸುತ್ತಿರುವುದು

ಮನಸ್ಸನ್ನು ಕೆರೆಯಾಗಿ ಮಾಡದೆ, ಜೀವಂತ ಕಾರಂಜಿಯಾಗಿರುಸುವುದೇ ಶಿಕ್ಷಣದ ಗುರಿ



22/9/02 ರಂದು ಬೆಂಗಳೂರಿನಲ್ಲಿ ನಡೆದ ಕೊಡಗು ಮತ್ತು ದ. ಕ. ಗೌಡ ಸಮಾಜದ ವಾರ್ಷಿಕ ಸಮಾರಂಭದಲ್ಲಿ ಹಾಲಿ ಅಧ್ಯಕ್ಷ ದಂಬೆಕೋಡಿ ಆನಂದನವರು ಶಿಕ್ಷಣ ಕ್ಷೇತ್ರದ ಭೀಷ್ಮ ಶ್ರೀ ಕುರುಂಜಿ ವೆಂಕಟರಮಣ ಗೌಡರು, ಒಕ್ಕಲಿಗರ ಸಂಘದ ಅಧ್ಯಕ್ಷ ಬಸವೇಗೌಡರು, ಪ್ರೊ|| ಚಿದಾನಂದ ಗೌಡರು ಹಾಗೂ ಉಪಾಧ್ಯಕ್ಷ ತಿಮ್ಮಪ್ಪಗೌಡರು



ಸಮಾರಂಭದಲ್ಲಿ ಶ್ರೀ ಕುರುಂಜಿ ವೆಂಕಟರಮಣ ಗೌಡರು,
ಕೊಳಂಬೆ ಚಿದಾನಂದಗೌಡರನ್ನು ಶಾಲು ಹೊದಿಸಿ ಸನ್ಮಾನಿಸುತ್ತಿರುವುದು.



ಸಮಾರಂಭದಲ್ಲಿ ರಾಷ್ಟ್ರಪತಿ ವಿಜೇತೆ ತೆಕ್ಕಡೆ ಜಯಶೀಲಾರವರು ಕುವೆಂಪುರವರ ಮಗಳು
ಕವಿಯಿತ್ರಿ ತಾರಿಣಿಯವರನ್ನು ಶಾಲು ಹೊದಿಸಿ ಸನ್ಮಾನಿಸುತ್ತಿರುವುದು.

Reg. No. KA/SK/MYS-88 Registered : 10-01-96 TCI Kar. 09592



# ಕೊಡಗು ಗೌಡ ಮಾಜಿ ಸೈನಿಕರ ಕ್ಷೇಮಾಭಿವೃದ್ಧಿ ಸಂಘ,

C/o ಗೌಡ ವಿದ್ಯಾರ್ಥಿ ನಿಲಯ, ನಂ. 70, 4 ನೇ ಬ್ಲಾಕ್, ಜಯಲಕ್ಷ್ಮೀಪುರಂ, ಮೈಸೂರು - 12

ಕೊಡಗು ಗೌಡ ಮಾಜಿ ಸೈನಿಕರ ವತಿಯಿಂದ ಜನಾಂಗದ

## ರಸಪ್ರಶ್ನೆ, ಸೋಬಾನೆ ಹಾಡು, ಮತ್ತು ಚಿತ್ರ ಬಿಡಿಸುವ ಕಾರ್ಯಕ್ರಮ

ದಿನಾಂಕ **24-11-2002** ಸಮಯ ಮಧ್ಯಾಹ್ನ **2** ಘಂಟೆಗೆ ಸ್ಥಳ ಕೊಡಗು ಗೌಡ ವಿದ್ಯಾರ್ಥಿ ನಿಲಯ, ಜಯಲಕ್ಷ್ಮೀಪುರಂ ಮೈಸೂರು.

*ರಸಪ್ರಶ್ನೆ ಕಾರ್ಯಕ್ರಮ* : **15** ರಿಂದ **25** ವರ್ಷದ ಒಳಗಡೆಯಿರುವ ಯುವಕ ಯುವತಿಯರಿಗೆ ಮಾತ್ರ
(ವಿಷಯ : ಸಾಮಾನ್ಯ ಜ್ಞಾನ)

*ರಸ ಪ್ರಶ್ನೆ ಕಾರ್ಯಕ್ರಮ* : **25** ವರ್ಷದ ಮೇಲ್ಪಟ್ಟು ಎಲ್ಲಾ ಮಹಾನೀಯರು ಮತ್ತು ಮಹಿಳೆಯರಿಗೆ
( ವಿಷಯ : ನಮ್ಮ ಸಂಪ್ರದಾಯ ಮತ್ತು ಆಚಾರ ವಿಚಾರದ ಬಗ್ಗೆ )

*ಚಿತ್ರ ಬರೆಯುವ ಕಾರ್ಯಕ್ರಮ* : **15** ವರ್ಷಕ್ಕಿಂತ ಕಡಿಮೆಯಿರುವ ಎಲ್ಲಾ ಗಂಡು ಮತ್ತು ಹೆಣ್ಣು ಮಕ್ಕಳಿಗೆ

*ಸೋಬಾನೆ ಹಾಡು ಕಾರ್ಯಕ್ರಮ* : ಮಹನೀಯರಿಗೆ, ಮಹಿಳೆಯರಿಗೆ ಹಾಗೂ ಯುವಕ ಯುವತಿಯರಿಗೆ

*ಸಮಾರಂಭದ ಕಾರ್ಯಸೂಚಿ :*

1. ಪ್ರಾರ್ಥನೆ, 2.ಸ್ವಾಗತ, 3. ಸನ್ಮಾನ, 4.ಅತಿಥಿಗಳಿಂದ ಭಾಷಣ, 5. ಅಧ್ಯಕ್ಷರ ಭಾಷಣ, 6. ಬಹುಮಾನ ವಿತರಣೆ, 7. ವಂದನಾರ್ಪಣೆ.

ದಿನಾಂಕ : **1-12-2002** ಸಮಯ : ಮಧ್ಯಾಹ್ನ **2** ಗಂಟೆಗೆ, ಸ್ಥಳ : ಕೊಡಗು ಗೌಡ ವಿದ್ಯಾರ್ಥಿ ನಿಲಯ, ಜಯಲಕ್ಷ್ಮೀಪುರಂ, ಮೈಸೂರು.

ರಸಪ್ರಶ್ನೆ ಕಾರ್ಯಕ್ರಮ ಅಂತಿಮ ಹಂತ *ಉದ್ಘಾಟನೆ :* ಅತಿಥಿಗಳಿಂದ *ಅಧ್ಯಕ್ಷತೆ :* ತಡಿಯಪ್ಪನ ಪಿ. ಕುಮಾರ ಜಯು ಅಧ್ಯಕ್ಷರು, ಕೊ. ಗೌ. ಮಾ. ಸೈ. ಕ್ಷೇ. ಸಂಘ

*ಸನ್ಮಾನಿತ ಮುಖ್ಯ ಅತಿಥಿಗಳು :*

ಶ್ರೀ ನಂಗಾರು ನಾಣಯ್ಯನವರು, ಕೆ. ಎ. ಎಸ್., ಅಸಿಸ್ಟೆಂಟ್ ಕಮೀಷನರ್ ಆಫ್ ಕಮರ್ಷಿಯಲ್ ಟ್ಯಾಕ್ಸ್, ಬೆಂಗಳೂರು.
ಶ್ರೀ ಕರ್ಣಯ್ಯನ ಅಪ್ಪಯ್ಯನವರು, ಕೆ. ಎ.ಎಸ್., ಸ್ಪೆಷಲ್ ಆಫೀಸರ್ ಟು ಚೀಫ್ ಮಿನಿಸ್ಟರ್
ಶ್ರೀ ಬೈತಡ್ಕ ಜೋಯಪ್ಪನವರು ಅಸಿಸ್ಟೆಂಟ್ ಕಮೀಷನರ್ ಆಫ್ ಪೊಲೀಸ್,ಬೆಂಗಳೂರು.
ಶ್ರೀ ಕೆಟೋಳಿ ಯತೀಶ್ ಕುಮಾರ್‌ರವರು, ಕೆ.ಎ.ಎಸ್., ಅಸಿಸ್ಟೆಂಟ್ ರಿಜಿಸ್ಟ್ರಾರ್ ಆಫ್ ಕೋ-ಆಪರೇಟಿವ್, ಮೈಸೂರು.
ಡಾ॥ ಚೆರಿಯಮನೆ ಜಯರಾಂ,ಎಂ.ಬಿ. ಬಿ. ಎಸ್., ನೌಕ ಪಡೆಯ ಮಾಜಿ ಲೆಫ್ಟಿನೆಂಟ್ (ಸರ್ಜನ್) ಹಾಗೂ ಡಾಕ್ಟರ್, ಮೈಸೂರು.

*ವಿ. ಸೂ. :* ರಸಪ್ರಶ್ನೆ, ಶೋಭಾನೆ ಹಾಡು ಮತ್ತು ಚಿತ್ರ ಬಿಡಿಸುವ ಕಾರ್ಯಕ್ರಮದಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳು ತಾ: 23/11/02 ರ ಒಳಗೆ ಕೆಳ ಕಾಣಿಸಿದ ದೂರವಾಣಿಯಲ್ಲಿ ಸಂಪರ್ಕಿಸಿ ತಮ್ಮ ಹೆಸರನ್ನುನೋಂದಾಯಿಸಿ ಕೊಳ್ಳುವಂತೆ ವಿನಂತಿ.

1. ತಡಿಯಪ್ಪನ ಕುಮಾರ ಜಯ, ಅಧ್ಯಕ್ಷರು, - 363574
2. ಕೊಂಬಾರನ ಸುಬ್ಬಯ್ಯ ಕಾರ್ಯದರ್ಶಿ - 302650
3. ಕರ್ಣಯ್ಯನ ಲಕ್ಷ್ಮಣ ನಿರ್ದೇಶಕರು, - 489052
4. ಪಟ್ಟಡ ಪ್ರಭಾಕರ, ಸಲಹೆಗಾರರು, - 404290

**ಸರ್ವರಿಗೂ ಆದರದ ಸುಸ್ವಾಗತ**

## ಅಭಿನಂದನೆಗಳು



ಕುಮಾರಿ ಹೃಷಿತ

ಕುಮಾರಿ ಹೃಷಿತ (ಕುಂಞಾಳಿ ಶ್ರೀಮತಿ ವಿನು ಮತ್ತು ಶ್ರೀ ಲಕ್ಷ್ಮಣ ಇವರುಗಳ ಹಾಗೂ ಶ್ರೀಮತಿ ಮತ್ತು ಪ್ರೊಫೆಸರ್ ಬೋಜಪ್ಪನವರ ಮೊಮ್ಮಗಳು) ಇವರು ಕರ್ನಾಟಕದ Vishweshwaraiah Technological University ಇದರ ವಿದ್ಯಾರ್ಥಿನಿಯಾಗಿದ್ದು 2001-02ನೇ ಸಾಲಿನಲ್ಲಿ ಇಡೀ ಯೂನಿವರ್ಸಿಟಿಯಲ್ಲಿ ತನ್ನ ಅಂತಿಮ ಎಂ.ಬಿ.ಎ. ಪರೀಕ್ಷೆಯಲ್ಲಿ 7ನೇ ರ್‍ಯಾಂಕನ್ನು ಗಳಿಸಿ ಸಮಗ್ರ ಕೊಡಗಿನ ಗೌಡ ಜನಾಂಗಕ್ಕೆ ಹೆಮ್ಮೆಯನ್ನು ಗಳಿಸಿಕೊಟ್ಟಿದ್ದಾರೆ. ಹಾಗೂ ಇವರು B.Sc., (Environmental Science) ಪದವಿಯನ್ನು ಪಡೆದ ನಂತರ M.S. Ramaiah Institute of Technology ಬೆಂಗಳೂರ್‌ನಲ್ಲಿ ಎಂ.ಬಿ.ಎ ಮಾಡುತ್ತಿದ್ದು ಕಾಲೇಜಿನಲ್ಲಿ ಡಿಸ್ಟಿಂಕ್ಷನ್ ಮತ್ತು 1ನೇ ರ್‍ಯಾಂಕ್ ಗಳಿಸಿದ್ದಾರೆ. ಇವರಿಗೆ ಕೊಡಗು ಸಂಗಾತಿಯು ತನ್ನ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುವುದಲ್ಲದೆ ಶ್ರೀ ಕಾವೇರಿ ಮಾತೆ ಅವರನ್ನು ಆಶೀರ್ವದಿಸಿ ಇನ್ನೂ ಹೆಚ್ಚಿನ ಶ್ರೇಯಸ್ಸಿಗೆ ನಾಂದಿಯಾಗಲಿ ಎಂದು ಹಾರೈಸುತ್ತಿದೆ.

**Kodagu Sangathi** Kannada Fortnightly Edited, Published, Printed by **Pattada Sheelamani, 1055c, Doddanna Buildings, Hunsur Road, Hinkal Post, Mysore - 570017. ☎ : 0821/404290.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ☎ : 0821/431792.